| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌಕರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ಮತ್ತು ಆಸ್ತಿ ಪಾಸ್ತಿ ಎಷ್ಟು |
|---|---|---|---|---|---|---|---|---|
| | | | | | ಮೊ.ಠಾಣೆ. | ಬರಹಗಾರರು | | |
| 124. | ತುಮಕೂರು | 2016 | 02/2016 ಕಲಂ 7.13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್-1988 | 03.10.2016 | ಶ್ರೀ.ಟಿ.ಕೋದಂಡ ರಾಮ್, ಪೊಲೀಸ್ ಉಪಾಧೀಕ್ಷಕರು, ಎ.ಸಿ.ಬಿ. ತುಮಕೂರು. | ಆರ್. ಸುಬ್ರಹ್ಮಣ್ಯ ಜಂಟಿ ನಿರ್ದೇಶಕರು, ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ ತುಮಕೂರು. | ಅಭಿಯೋಜನಾ ಮಂಜೂರಾತಿ ಬರಬೇಕಾಗಿರುತ್ತದೆ. | ರೂ.1,21,47,627-00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (ಶೇ.238) ಹೊಂದಿರುತ್ತಾರೆ. |
| 125. | ತುಮಕೂರು | 2016 | 05/2016 ಕಲಂ 7.13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್-1988 | 12.12.2016 | ಶ್ರೀ.ಎಸ್.ವಿ.ಗಿರೀಶ್, ಪೊಲೀಸ್ ಇನ್ಸ್‌ಪೆಕ್ಟರ್, ಎ.ಸಿ.ಬಿ ಪೊಲೀಸ್ ಠಾಣೆ, ತುಮಕೂರು | ನರಸಿಂಹಮೂರ್ತಿ, ವಲಯ ಅರಣ್ಯಾಧಿಕಾರಿ, ತುಮಕೂರು ವಲಯ, ತುಮಕೂರು. | ಅಭಿಯೋಜನಾ ಮಂಜೂರಾತಿ ಆದೇಶ ಬರಬೇಕಾಗಿರುತ್ತದೆ. | ರೂ.2,86,05,034 -00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (497.77%) ಹೊಂದಿರುತ್ತಾರೆ. |
| 126. | ತುಮಕೂರು | 2017 | 03/17 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್-1988 | 08.03.2017 | ಶ್ರೀ.ವಿ.ಎಂ.ಗುರು ಪ್ರಸಾದ್, ಪೊಲೀಸ್ ಇನ್ಸ್‌ಪೆಕ್ಟರ್, ಎ.ಸಿ.ಬಿ. ತುಮಕೂರು. | ಶ್ರೀಹರಿ, ಸಹಾಯಕ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ, ತುಮಕೂರು. | ತನಿಖೆಯಲ್ಲಿರುತ್ತದೆ. (ಅಂತಿಮ ವರದಿ ತಯಾರಿಕೆಯಲ್ಲಿರುತ್ತದೆ.) | ರೂ. 57,16,808 -00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (227%) ಹೊಂದಿರುತ್ತಾರೆ. |
| 127. | ತುಮಕೂರು | 2017 | 08/2017 ಕಲಂ 13(1)(ಇ) ರೆ.ವಿ 13(2), ಪಿ.ಸಿ.ಆಕ್ಟ್ 1988. | 12.12.2017 | ಶ್ರೀ.ಪ್ರಭುಲಿಂಗಯ್ಯ ಹಿರೇಮಠ, ಪೊಲೀಸ್ ನಿರೀಕ್ಷಕರು, ಎಸಿಬಿ, ತುಮಕೂರು. | ಜಿ.ಸಿ. ಜಗದೀಶ್, ಎಇಇ ಲೋಕೋಪ ಯೋಗಿ ಇಲಾಖೆ, ಕೊರಟಗೆರೆ ಟೌನ್ | ತನಿಖೆಯಲ್ಲಿರುತ್ತದೆ. | ರೂ.1,01,31,833-00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (202.6%) ಹೊಂದಿರುತ್ತಾರೆ. |
| 128. | ತುಮಕೂರು | 2018 | 01/2018 ಕಲಂ 13(1)(ಇ) ರೆ.ವಿ 13(2), ಪಿ.ಸಿ.ಆಕ್ಟ್ 1988. | 08.03.2018 | ವಿಜಯ ಮಹಂತೇಶ ಮಠಪತಿ, ಪೊಲೀಸ್ ನಿರೀಕ್ಷಕರು, ಎ.ಸಿ.ಬಿ, ತುಮಕೂರು. | ಶ್ರೀ ಎ.ಪಿ. ಶಿವಕುಮಾರ್, ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಕಡೂರು, ಚಿಕ್ಕಮಗಳೂರು ಜಿಲ್ಲೆ | ತನಿಖೆಯಲ್ಲಿದೆ | ರೂ.92.20,000-00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (131.1%) ಹೊಂದಿರುತ್ತಾರೆ. (36,92,900/- ಹಣವನ್ನು ಆರೋಪಿತರ ಮನೆಯ ಶೋಧನಾ ಕಾಲದಲ್ಲಿ ಜಪ್ತುಪಡಿಸಿಕೊಳ್ಳಲಾಗಿದೆ.) |
| 129. | ತುಮಕೂರು | 2018 | 07/2018 ಕಲಂ 13(1)(ಇ) ರೆ.ವಿ 13(2), ಪಿ.ಸಿ.ಆಕ್ಟ್ 1988. | 12.07.2018 | ಹಾಲಪ್ಪ.ಎಸ್.ಎನ್, ಪೊಲೀಸ್ ನಿರೀಕ್ಷಕರು, ಎ.ಸಿ.ಬಿ, ತುಮಕೂರು. | ಶ್ರೀ ಶ್ರೀನಿವಾಸ. ಎಂ.ಸಿ, KHSRDR ಕಛೇರಿ, ಸರ್ಕಾರಿ ಜಿಲ್ಲಾ ಆಸ್ಪತ್ರೆ ಅವರಣ ತುಮಕೂರು | ತನಿಖೆಯಲ್ಲಿದೆ. | ರೂ. 1.52.12,000-00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (179%) ಹೊಂದಿರುತ್ತಾರೆ. |
| 130. | ತುಮಕೂರು | 2018 | 09/2018 ಕಲಂ 13(1)(ಇ) ರೆ.ವಿ 13(2), ಪಿ.ಸಿ.ಆಕ್ಟ್ 1988. | 07.08.2018 | ಹಾಲಪ್ಪ.ಎಸ್.ಎನ್, ಪೊಲೀಸ್ ನಿರೀಕ್ಷಕರು, ಎ.ಸಿ.ಬಿ. ತುಮಕೂರು. | ಶ್ರೀ ಶಿವಕುಮಾರ್. ಹೆಚ್ ಅಧೀಕ್ಷಕ ಇಂಜಿನಿಯರ್, ಹೇಮಾವತಿ ನಾಲಾ ವಲಯ ತುಮಕೂರು | ತನಿಖೆಯಲ್ಲಿದೆ | ರೂ. 1.64.83,000-00 ಗಳಷ್ಟು ಮೌಲ್ಯದ ಅಕ್ರಮ ಆಸ್ತಿಯನ್ನು (164%) ಹೊಂದಿರುತ್ತಾರೆ. |

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ಹಣ ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| 131. | ರಾಮನಗರ | 2016 | 05/2016 ಕಲಂ 13(1)(ಇ) ರೆ.ವಿ 13(2), ಪಿ.ಸಿ.ಆಕ್ಟ್ 1988. | 05-12-2016 | ಶ್ರೀ. ಕೆ. ಮಲ್ಲೇಶ್, ಆರಕ್ಷಕ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ರಾಮನಗರ ಜಿಲ್ಲೆ. | ಶ್ರೀ. ಗಿರೀಶ ಬಿನ್ ವೆಂಕಟಚಲಯ್ಯ, 45 ವರ್ಷ, ವಕ್ಕಲಿಗರು, ಬಿಲ್ ಕಲೆಕ್ಟರ್ ಕೆಲಸ, ಬನ್ನಿಕುಪ್ಪೆ ಗ್ರಾಮ ಪಂಚಾಯ್ತಿ, | ಪಿ.ಎಸ್.ಓ ಗೆ ಕೋರಿಕೆ ಸಲ್ಲಿಸಿಕೊಂಡಿರುತ್ತೆ. | ನಗದು ಹಣ, ವಡವೆಗಳು ಮತ್ತು ಯಾವುದೇ ಆಸ್ತಿಯನ್ನು ಜಪ್ತಿ ಮಾಡಿರುವುದಿಲ್ಲ. |
| 132. | ರಾಮನಗರ | 2017 | 03/2017, ಕಲಂ. 13(1) (ಇ) ರೆ.ವಿ 13(2) ಪಿ.ಸಿ ಆಕ್ಟ್ 1988 | 08-03-2017 | ಶ್ರೀ. ಕೆ. ಮಲ್ಲೇಶ್, ಆರಕ್ಷಕ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ರಾಮನಗರ ಜಿಲ್ಲೆ. | ಶ್ರೀ ಸ್ವಾಮಿ, ಪಿ.ಡಿ.ಓ, ಮಾಯಗಾನಹಳ್ಳಿ ಗ್ರಾಮ ಪಂಚಾಯ್ತಿ ರಾಮನಗರ ತಾಲ್ಲೂಕು | ತನಿಖೆಯಲ್ಲಿರುತ್ತೆ. | ನಗದು ಹಣ, ವಡವೆಗಳು ಮತ್ತು ಯಾವುದೇ ಆಸ್ತಿಯನ್ನು ಜಪ್ತಿ ಮಾಡಿರುವುದಿಲ್ಲ. |
| 133. | ರಾಮನಗರ | 2018 | 04/2018, ಕಲಂ. 13(1) (ಇ) ರೆ.ವಿ 13(2) ಪಿ.ಸಿ ಆಕ್ಟ್ 1988 | 26-04-2017 | ಶ್ರೀ. ಪ್ರಕಾಶ್, ಆರಕ್ಷಕ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ರಾಮನಗರ ಜಿಲ್ಲೆ. | ಎಂ.ಎಲ್. ಗಣೇಶ್‌ಮೂರ್ತಿ, ಕಛೇರಿ ಅಧೀಕ್ಷಕರು, 44 ವರ್ಷ, ಸಮುದಾಯ ಆರೋಗ್ಯ ಕೇಂದ್ರ, ಸೋಲೂರು, ಮಾಗಡಿ ತಾಲ್ಲೂಕು, | ತನಿಖೆಯಲ್ಲಿರುತ್ತೆ. | ನಗದು ಹಣ, ವಡವೆಗಳು ಮತ್ತು ಯಾವುದೇ ಆಸ್ತಿಯನ್ನು ಜಪ್ತಿ ಮಾಡಿರುವುದಿಲ್ಲ. |
| 134. | ಕೋಲಾರ | 2016 | 02/2016 ಕಲಂ 13(1)(ಡಿ) ರೆ/ವಿ 13(2) ಪಿ.ಸಿ. ಆಕ್ಟ್ | 16-09-2016 | ಶ್ರೀ.ಹೆಚ್.ಜೆ.ತಿಪ್ಪೇಸ್ವಾಮಿ ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1) ದಯಾನಂದ.ಎಂ.ಪಿ ಬಿನ್ ಪುಟ್ಟಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ,<br>2) ರಾಜಣ್ಣ ಬಿನ್ ಗೋಪಾಲ ಕೃಷ್ಣ ಸ್ವಾಮಿ, ವಾಣಿಜ್ಯ ತೆರಿಗೆ ಪರಿವೀಕ್ಷಕರು,<br>3) ಸಂಪತ್ ಕುಮಾರ್ ಬಿನ್ ಎಲ್.ಎಸ್.ಜಹಗೀರ್ ದಾರ್, ಪ್ರಥಮ ದರ್ಜೆ ಸಹಾಯಕ<br>4) ಪಿ.ಸಿ. ಅಂಗಯ್ಯ ಬಿನ್ ಚಿಕ್ಕ ಅಂಗಯ್ಯ, 42 ವರ್ಷ, ಡಿ ಗ್ರೂಪ್ ನೌಕರ, ಎಲ್ಲರೂ ಸೇಲ್ಸ್ ಟ್ಯಾಕ್ಸ್ ಚೆಕ್ ಪೋಸ್ಟ್ (ಒಳ ಮತ್ತು ಹೊರ), ಮುದಿಗೆರೆ (ನಂಗಲಿ), ಮುಳಬಾಗಿಲು ತಾಲ್ಲೂಕು. ಕೋಲಾರ ಜಿಲ್ಲೆ. | ಘನ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಪಿಟಿಷನ್ ನಂ 8578/2016. ದಿನಾಂಕ: 30/11/2016. ರಂತೆ ತಡೆಯಾಜ್ಞೆ ಇರುತ್ತದೆ | ರೂ. 5605/- ನಗದು ಹಣ |
| 135. | ಕೋಲಾರ | 2016 | 04/2016 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್ | 05-12-2016 | ಶ್ರೀ.ವೈ.ಆರ್.ರಂಗ ಶಾಮಯ್ಯಪಿ.ಐ., ಎ.ಸಿ.ಬಿ, ಕೋಲಾರ ಜಿಲ್ಲೆ, ಕೋಲಾರ. | ನರಸಿಂಹಯ್ಯ ಬಿನ್ ಲೇಟ್ ಮುನಿತಿಮ್ಮಯ್ಯ, ಕಛೇರಿ ಅಧೀಕ್ಷಕರು, ಮುಜರಾಯಿ ಇಲಾಖೆ, ಕೋಲಾರ ಜಿಲ್ಲೆ, | ತನಿಖೆಯಲ್ಲಿರುತ್ತದೆ | ಒಟ್ಟು ಆಸ್ತಿ ಮೌಲ್ಯ ರೂ.2,26,76,019/- |

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ನಿವರ | ಆರೋಪಿತ ಸರ್ಕಾರಿ ನೌಕರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ... ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| | | | | | | ಕೋಲಾರ. | | |
| 136. | ಕೋಲಾರ | 2016 | 05/2016 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್ | 05-12-2016 | ಶ್ರೀ.ದೇವೇಂದ್ರಪ್ಪ.ಕೆ.ಎಸ್ ಪಿ.ಐ., ಎ.ಸಿ.ಬಿ, ಕೋಲಾರ ಜಿಲ್ಲೆ, ಕೋಲಾರ. | ಎಂ.ಆರ್.ಚಲಪತಿ ಗೌಡ ಬಿನ್ ಲೇಟ್ ಎಂ.ರಾಮೇಗೌಡ, ದ್ವಿತೀಯ ದರ್ಜೆ ಲೆಕ್ಕ ಸಹಾಯಕರು, ಯಲ್ದೂರು ಗ್ರಾಮ ಪಂಚಾಯತಿ, ಶ್ರೀನಿವಾಸಪುರ ತಾಲ್ಲೂಕು. | ನ್ಯಾಯಾಲಯಕ್ಕೆ ಬಿ-ಅಂತಿಮ ವರದಿಯನ್ನು ಸಲ್ಲಿಸಲು ಅನುಮತಿಗಾಗಿ ಕೋರಿದೆ. | ರೂ. 21,000/- ನಗದು ಹಣ ಒಟ್ಟು ಆಸ್ತಿ ಮೌಲ್ಯ ರೂ.63,46,882/- |
| 137. | ಕೋಲಾರ | 2017 | 02/2017 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್ | 08-03-2017 | ಶ್ರೀ. ರಂಗಶಾಮಯ್ಯ. ವೈ.ಆರ್. ಪೋಲೀಸ್ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ಕೋಲಾರ ಜಿಲ್ಲೆ | ಶ್ರೀ.ಮಂಜುನಾಥ.ಎಂ ಬಿನ್ ಮುನಿಗಂಗಪ್ಪ, ಸಹಾಯಕ ಕಾರ್ಯಪಾಲಕ ಅಭಿಯಂತರರು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಮುಳಬಾಗಿಲು | ತನಿಖೆಯಲ್ಲಿರುತ್ತದೆ | ಒಟ್ಟು ಆಸ್ತಿ ಮೌಲ್ಯ ರೂ.2,91,69,628/- |
| 138. | ಕೋಲಾರ | 2017 | 04/2017 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್ | 15-06-2017 | ಶ್ರೀ. ದೇವೇಂದ್ರಪ್ಪ.ಕೆ.ಎಸ್, ಪಿ.ಐ., ಎ.ಸಿ.ಬಿ, ಕೋಲಾರ ಜಿಲ್ಲೆ, ಕೋಲಾರ. | ಡಾ.ಎಸ್.ಎಂ.ವಿ. ಕುಮಾರ್ ಗೌಡ, ಪ್ರಾಂಶುಪಾಲರು, ಜಿಲ್ಲಾ ತರಬೇತಿ ಕೇಂದ್ರ, ಕೋಲಾರ ಜಿಲ್ಲೆ, | ತನಿಖೆಯಲ್ಲಿರುತ್ತದೆ | ರೂ. 2,21,210/- ನಗದು ಹಣ ಒಟ್ಟು ಆಸ್ತಿ ಮೌಲ್ಯ ರೂ.5,75,02,116/- |
| 139. | ಕೋಲಾರ | 2018 | 03/2018 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್. 1988. | 08-03-2018 | ಶ್ರೀ. ರಂಗಶಾಮಯ್ಯ. ವೈ.ಆರ್. ಪೋಲೀಸ್ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ಕೋಲಾರ ಜಿಲ್ಲೆ | ಶ್ರೀ. ಎಸ್. ಅಪ್ಪಿರೆಡ್ಡಿ ಬಿನ್ ಲೇಟ್ ನಾರೆಪ್ಪ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ | ತನಿಖೆಯಲ್ಲಿರುತ್ತದೆ | ರೂ. 68,890/- ನಗದು ಹಣ ಒಟ್ಟು ಆಸ್ತಿ ಮೌಲ್ಯ ರೂ.5,72,62,034/- |
| 140. | ಕೋಲಾರ | 2018 | 05/2018 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್. 1988. | 26-02-2018 | ಶ್ರೀ. ರಂಗಶಾಮಯ್ಯ. ವೈ.ಆರ್. ಪೋಲೀಸ್ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ. ಕೋಲಾರ ಜಿಲ್ಲೆ | ಶ್ರೀ. ಬಿ.ಆರ್.ಮುನಿವೆಂಕಟಪ್ಪ ಬಿನ್ ಲೇಟ್ ರಾಮಯ್ಯ, ಶಿರಸ್ತೇದಾರ್ (ಆರ್.ಹೆಚ್.ಎ), ಜಿಲ್ಲಾಧಿಕಾರಿಗಳ ಕಛೇರಿ, ಕೋಲಾರ | ತನಿಖೆಯಲ್ಲಿರುತ್ತದೆ | ರೂ. 2,28,810/- ನಗದು ಹಣ ಒಟ್ಟು ಆಸ್ತಿ ಮೌಲ್ಯ ರೂ.2,06,17,637/- |
| 141. | ಕೋಲಾರ | 2018 | 06/2018 ಕಲಂ 13(1)(ಇ) ರೆ/ವಿ 13(2) ಪಿ.ಸಿ. ಆಕ್ಟ್. 1988. | 03-05-2018 | ಶ್ರೀ. ರಂಗಶಾಮಯ್ಯ. ವೈ.ಆರ್. ಪೋಲೀಸ್ ನಿರೀಕ್ಷಕರು, ಭ್ರಷ್ಟಾಚಾರ ನಿಗ್ರಹ ದಳ, ಕೋಲಾರ ಜಿಲ್ಲೆ | ಶ್ರೀ. ಅಶ್ವಥಪ್ಪ ಹೆಚ್.ವೈ. ಬಿನ್ ಯಲಪ್ಪ, ದ್ವಿತೀಯ ದರ್ಜೆ, ಸಹಾಯಕರು, ಉಪ ನೊಂದಣಾಧಿಕಾರಿ ಗಳ ಕಛೇರಿ, ಕೋಲಾರ ತಾಲ್ಲೂಕು. | ತನಿಖೆಯಲ್ಲಿರುತ್ತದೆ | ರೂ. 49,000/- ನಗದು ಹಣ ಒಟ್ಟು ಆಸ್ತಿ ಮೌಲ್ಯ ರೂ.98,67,423/- |
| 142. | ಚಿಕ್ಕಬಳ್ಳಾಪುರ | 2016 | 02/2016 ಕಲಂ | 06-09-2016 | ಶ್ರೀ. ಬಿ.ಎನ್.ರಾಮರತ್ನ | ಶ್ರೀ.ಶ್ರೀನಿವಾಸರೆಡ್ಡಿ, ಉಪ | ತನಿಖೆಯಲ್ಲಿರುತ್ತದೆ | ರೂ. 4,36,52,558/- |

15

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌಕರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ಹಣ ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| | | | 13(1)(ಇ) ರೆ/ವಿ 13(2)ಪಿ.ಸಿ.ಆಕ್ಟ್. | | ಕುಮಾರ್, ಡಿವಎಸ್‌ಪಿ, ಎಸಿಬಿ, ಚಿಕ್ಕಬಳ್ಳಾಪುರ. | ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ, ಕೋಲಾರ ಜಿಲ್ಲೆ. | | ಮೌಲ್ಯದ ಆಸ್ತಿ ಮತ್ತು ರೂ.72,310/- ನಗದು. |
| 143. | ಚಿಕ್ಕಬಳ್ಳಾಪುರ | 2016 | 03/2016 ಕಲಂ 13(1)(ಇ) ರೆ/ವಿ 13(2)ಪಿ.ಸಿ.ಆಕ್ಟ್. | 06-09-2016 | ಶ್ರೀ. ಎಲ್.ಆಂಜಪ್ಪ, ಪಿಐ, ಎಸಿಬಿ, ಚಿಕ್ಕಬಳ್ಳಾಪುರ. | ಶ್ರೀ.ಜಿ.ಟಿ.ಶ್ರೀನಿವಾಸ, ಎಸ್.ಡಿ.ಎ., ತಾಲ್ಲೂಕು ಕಚೇರಿ, ಗುಡಿಬಂಡೆ. | ತನಿಖೆಯಲ್ಲಿರುತ್ತದೆ | ರೂ.8,95,08,988/- ಮೌಲ್ಯದ ಆಸ್ತಿ ಮತ್ತು ರೂ.8,880/- ನಗದು. |
| 144. | ಚಿಕ್ಕಬಳ್ಳಾಪುರ | 2016 | 04/2016 ಕಲಂ 13(1)(ಡಿ) ರೆ/ವಿ 13(2) ಪಿ.ಸಿ. ಆಕ್ಟ್ | 16-09-2016 | ಶ್ರೀ.ಹೆಚ್.ಜೆ.ತಿಪ್ಪೇಸ್ವಾಮಿ ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1) ದಯಾನಂದ.ಎಂ.ಪಿ ಬಿನ್ ಪುಟ್ಟಯ್ಯ, ವಾಣಿಜ್ಯ ತೆರಿಗೆ ಅಧಿಕಾರಿ,<br>2) ರಾಜಣ್ಣ ಬಿನ್ ಗೋಪಾಲ ಕೃಷ್ಣ ಸ್ವಾಮಿ, ವಾಣಿಜ್ಯ ತೆರಿಗೆ ಪರಿವೀಕ್ಷಕರು,<br>3) ಸಂಪತ್ ಕುಮಾರ್ ಬಿನ್ ಎಲ್.ಎಸ್.ಜಹಗೀರ್ ದಾರ್, ಪ್ರಥಮ ದರ್ಜೆ ಸಹಾಯಕ<br>4) ಪಿ.ಸಿ. ಅಂಗಯ್ಯ ಬಿನ್ ಚಿಕ್ಕ ಅಂಗಯ್ಯ, 42 ವರ್ಷ, ಡಿ ಗ್ರೂಪ್ ನೌಕರ, ಎಲ್ಲರೂ ಸೇಲ್ಸ್ ಟ್ಯಾಕ್ಸ್ ಚೆಕ್ ಪೋಸ್ಟ್ (ಒಳ ಮತ್ತು ಹೊರ), ಮುದಿಗೆರೆ (ನಂಗಲಿ), ಮುಳಬಾಗಿಲು ತಾಲ್ಲೂಕು. ಕೋಲಾರ ಜಿಲ್ಲೆ. | ಅಂತಿಮ ವರದಿಯನ್ನು ತಯಾರು ಮಾಡಿ ಅಭಿಯೋಜನಾ ಮಂಜೂರಾತಿಗಾಗಿ ಕೋರಿ ಕೇಂದ್ರ ಕಛೇರಿಗೆ ಸಲ್ಲಿಸಿಕೊಂಡಿರುತ್ತದೆ. | ರೂ.94,939/- ನಗದು. |
| 145. | ಚಿಕ್ಕಬಳ್ಳಾಪುರ | 2017 | 05/2017 ಕಲಂ 13(1)(ಇ) ರೆ/ವಿ 13(2) ಪಿ.ಸಿ.ಆಕ್ಟ್. | 15-06-2017 | ಶ್ರೀಮತಿ ಲಕ್ಷ್ಮಿದೇವಿ ಎಂ., ಪಿಐ, ಎಸಿಬಿ, ಚಿಕ್ಕಬಳ್ಳಾಪುರ. | ಶ್ರೀ.ಎನ್.ವೆಂಕಟರಮಣಪ್ಪ, ಹಿರಿಯ ಪಾಲಕರು, ಸರ್ಕಾರಿ ಕಾಲೇಜು ಬಾಲಕರ ವಿದ್ಯಾರ್ಥಿ ನಿಲಯ, ಪೆರೇಸಂದ್ರ, ಚಿಕ್ಕಬಳ್ಳಾಪುರ ತಾಲ್ಲೂಕು. | ತನಿಖೆಯಲ್ಲಿರುತ್ತದೆ | ರೂ.1,23,77,190/- ಮೌಲ್ಯದ ಆಸ್ತಿ ಮತ್ತು ರೂ.15,810/- ನಗದು. |
| 146. | ಚಿಕ್ಕಬಳ್ಳಾಪುರ | 2017 | 08/2017 ಕಲಂ 13(1)(ಇ) ರೆ/ವಿ 13(2) ಪಿ.ಸಿ.ಆಕ್ಟ್. | 12-12-2017 | ಶ್ರೀಮತಿ.ಲಕ್ಷ್ಮಿದೇವಿ ಎಂ., ಪಿ.ಐ., ಎಸಿಬಿ, ಚಿಕ್ಕಬಳ್ಳಾಪುರ. | ಶ್ರೀ.ಡಿ.ಹೇಮಂತ್ @ ಡಿ.ಈರಪ್ಪ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ. | ತನಿಖೆಯಲ್ಲಿರುತ್ತದೆ | ರೂ.2,47,04,009/- ಮೌಲ್ಯದ ಆಸ್ತಿ, ರೂ.2,49,650/- ನಗದು ಮತ್ತು ರೂ.2,45,000/- ಮೌಲ್ಯದ ನಿಷೇದಿತ ನೋಟುಗಳು. |
| 147. | ಚಿಕ್ಕಬಳ್ಳಾಪುರ | 2018 | 05/2018 ಕಲಂ | 28-08-2018 | ಶ್ರೀ.ಶಿವಮಲವಯ್ಯ, ಪಿಐ, | ಶ್ರೀ.ಕೆ.ಪಿ.ಸಂಜೀವಪ್ಪ, ಕಾರ್ಯ | ತನಿಖೆಯಲ್ಲಿರುತ್ತದೆ | ರೂ.1,93,09,330/- |

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ... ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| | | | 13(1) (ಬಿ) ರೆ/ವಿ 13 (2) ಪಿ.ಸಿ. ಆಕ್ಟ್-1988 (ತಿದ್ದುಪಡಿ-2018). | | ಎಸಿಬಿ, ಚಿಕ್ಕಬಳ್ಳಾಪುರ. | ನಿರ್ವಾಹಣಾಧಿಕಾರಿಗಳು, ತಾಲ್ಲೂಕು ಪಂಚಾಯತಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಚಿಕ್ಕಬಳ್ಳಾಪುರ. | | ಮೌಲ್ಯದ ಆಸ್ತಿ ಮತ್ತು ರೂ.71,300/- ನಗದು. |
| 148. | ಬಳ್ಳಾರಿ | 2016 | 02/16 u/s 13[1][d][I] [II] [III], 13 [I] [e] r/w 13[2] P.C.Act 1988 and Sec.34 IPC | 19-08-2016 | ಶ್ರೀ. ಕೆ.ಆರ್. ಗೋಪಿಕೃಷ್ಣ, ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಜಿಲ್ಲೆ, ಕರ್ನಾಟಕ. | 1] ಟಿ.ನಾಗರಾಜು, ಸಿ.ಟಿ.ಐ., 2] ಜಿ.ಎನ್. ಪ್ರಕಾಶ್, ಸಿ.ಟಿ.ಐ., 3] ಡಿ.ಹನುಮಂತಶೆಟ್ಟಿ, ಎಸ್.ಡಿ.ಎ. 4] ಶ್ರೀ. ರಾಮನಗೌಡ, "ಡಿ" ಗ್ರೂಪ್ ನೌಕರ, ವಾಣಿಜ್ಯ ತೆರಿಗೆ ಇಲಾಖೆ, ಬಳ್ಳಾರಿ | ತನಿಖೆಯಲ್ಲಿದೆ | ನಗದು ಹಣ ರೂ.1,590- |
| 149. | ಬಳ್ಳಾರಿ | 2016 | 03/16 u/s13[1][d][I] [II] [III], 13 [I] [e] r/w 13[2] P.C.Act 1988 and Sec.34 IPC | 19-08-2016 | ಶ್ರೀ. ಪವನ್ ನೆಜ್ಜೂರ್, ಪೋಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾಸನ ಜಿಲ್ಲೆ. | 1] ಪಿ.ಮಂಜುನಾಥ, ಸೀನಿಯರ್ ಐ.ಎಂ.ವಿ. ಇನ್ಸ್‌ಪೆಕ್ಟರ್, 2] ಶ್ರೀ. ಯಲ್ಲಪ್ಪ.ಎಲ್. ಕೋಲಾಕರ, ಜೀಪ್‌ಚಾಲಕ, | ತನಿಖೆಯಲ್ಲಿದೆ | ನಗದು ಹಣ ರೂ 22,790/- |
| 150. | ಬಳ್ಳಾರಿ | 2016 | 04/16 u/s .13[1][d][I] [II] [III], 13 [I] [e] r/w 13[2] P.C.Act 1988 and Sec.34 IPC | 19-08-2016 | ಶ್ರೀ. ಬಿ. ಪರಶುರಾಮ, ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಜಿಲ್ಲೆ, ಕರ್ನಾಟಕ. | 1] ಶ್ರೀ. ಹೆಚ್.ಎ.ಇಕ್ಬಾಲ್, ಸೀನಿಯರ್ ಐ.ಎಂ.ವಿ. ಇನ್ಸ್‌ಪೆಕ್ಟರ್, ಸಾರಿಗೆ ಇಲಾಖೆ ಬಳ್ಳಾರಿ 2] ಶ್ರೀ. ಶಬ್ಬೀರ್‌ಪಾಶಾ, ಗಣಕಯಂತ್ರ ನಿರ್ವಾಹಕ, [ಹೊರಗುತ್ತಿಗೆ] ಸಾರಿಗೆ ಇಲಾಖೆ ಬಳ್ಳಾರಿ | ತನಿಖೆಯಲ್ಲಿದೆ | ನಗದು ಹಣ ರೂ. 11,610/- |
| 151. | ಬಳ್ಳಾರಿ | 2016 | 05/2016 ಕಲಂ: 13(1) (ಇ) ಸಹಿತ 13(2) ಪಿ.ಸಿ. ಕಾಯ್ದೆ 1988 | 21-12-2016 | ಶ್ರೀ. ನಾಗರಾಜ, ಪೋಲೀಸ್ ಇನ್ಸ್‌ಪೆಕ್ಟರ್, ಎಸಿಬಿ ಪೋಲೀಸ್ ಠಾಣೆ ಬಳ್ಳಾರಿ | ಡಾ॥ ಎಸ್.ಪಂಪಾಪತಿ, ಪ್ರಾಂಶುಪಾಲರು, ಜಿಲ್ಲಾ ತರಬೇತಿ ಕೇಂದ್ರ ಜಿಲ್ಲಾ ಆಸ್ಪತ್ರೆ, ಬಳ್ಳಾರಿ. | ತನಿಖೆಯಲ್ಲಿದೆ | ಪ್ರಾಥಮಿಕ ತನಿಖೆ ಯಿಂದ ಪತ್ತೆ ಹಚ್ಚಲಾದ ಆಸ್ತಿ ರೂ.1,25,38,327/- |
| 152. | ಬಳ್ಳಾರಿ | 2017 | ಗುನ್ನೆ ನಂ. 03/2017 ಕಲಂ: 13(1) (ಇ) ಸಹಿತ 13(2) ಪಿ.ಸಿ. | 15-03-2017 | ಶ್ರೀ. ನಾಗರಾಜ, ಪೋಲೀಸ್ ಇನ್ಸ್‌ಪೆಕ್ಟರ್, ಎಸಿಬಿ ಪೋಲೀಸ್ ಠಾಣೆ ಬಳ್ಳಾರಿ | ಕೆ.ಮರಿಗಾದಿ, ಎಸ್.ಡಿ.ಎ, ಪ್ರಭಾರಿ ಸಬ್‌ರಿಜಿಸ್ಟರ್ ಹೂವಿನ ಹಡಗಲಿ, ವಾಸ: ಬಸವೇಶ್ವರ | ತನಿಖೆಯಲ್ಲಿದೆ | ನಗದು ಹಣ ರೂ 2,74,100/-ಗಳು ಜಪ್ತು ಪಡಿಸಿಕೊಂಡಿದೆ. |

16

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ಹಣ ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| | | | ಕಾಯ್ದೆ 1988 | | | ಬಡಾವಣೆ, ಹೊಸಪೇಟೆ ನಗರ, ಬಳ್ಳಾರಿ ಜಿಲ್ಲೆ. | | ಪ್ರಾಥಮಿಕ ತನಿಖೆಯಿಂದ ಪತ್ತೆ ಹಚ್ಚಲಾದ ಆಸ್ತಿ ರೂ 1,34,52,100/ |
| 153. | ಬಳ್ಳಾರಿ | 2017 | ಗುನ್ನೆ ನಂ. 08/2017 ಕಲಂ: 13(1) (ಇ) ಸಹಿತ 13(2) ಪಿ.ಸಿ. ಕಾಯ್ದೆ 1988 | 12-12-2017 | ಶ್ರೀ. ನಾಗರಾಜ, ಪೋಲೀಸ್ ಇನ್ಸ್‌ಪೆಕ್ಟರ್, ಎಸಿಬಿ ಪೋಲೀಸ್ ಠಾಣೆ ಬಳ್ಳಾರಿ | ಎಸ್. ಷಾಷಾವಲಿ, ಆಯುಕ್ತರು, ವಿಜಯನಗರ ಪ್ರದೇಶಾಭಿ ವೃದ್ಧಿ ಪ್ರಾಧಿಕಾರ, ತೋರಣಗಲ್ಲು | ತನಿಖೆಯಲ್ಲಿದೆ | ಪ್ರಾಥಮಿಕ ತನಿಖೆಯಿಂದ ಪತ್ತೆ ಹಚ್ಚಲಾದ ಆಸ್ತಿ ರೂ 1,36,73,000/ |
| 154. | ಬಳ್ಳಾರಿ | 2018 | ಗುನ್ನೆ ನಂ. 03/2018 ಕಲಂ: 13(1) (ಇ) ಸಹಿತ 13(2) ಪಿ.ಸಿ. ಕಾಯ್ದೆ 1988 | 03-05-2018 | ಶ್ರೀ. ಪ್ರಭುಲಿಂಗಯ್ಯ ಎಸ್. ಹಿರೇಮಠ, ಪೋಲೀಸ್ ಇನ್ಸ್‌ಪೆಕ್ಟರ್, ಎಸಿಬಿ ಪೋಲೀಸ್ ಠಾಣೆ ಬಳ್ಳಾರಿ | ಎಸ್. ಆದೆಪ್ಪ, ಕಾರ್ಯನಿರ್ವಾಹಕ ಅಭಿಯಂತರರು, ನೀರಾವರಿ ಇಲಾಖೆ, ಕೋಟೆ, ಬಳ್ಳಾರಿ. | ತನಿಖೆಯಲ್ಲಿದೆ | ಪ್ರಾಥಮಿಕ ತನಿಖೆಯಿಂದ ಪತ್ತೆ ಹಚ್ಚಲಾದ ಆಸ್ತಿ ರೂ 1,41,98,991/ |
| 155. | ಬಳ್ಳಾರಿ | 2018 | ಗುನ್ನೆ ನಂ. 06/2018 ಕಲಂ: 13(1) (ಇ) ಸಹಿತ 13(2) ಪಿ.ಸಿ. ಕಾಯ್ದೆ 1988 | 08-07-2018 | ಶ್ರೀ. ಪ್ರಭುಲಿಂಗಯ್ಯ ಎಸ್. ಹಿರೇಮಠ, ಪೋಲೀಸ್ ಇನ್ಸ್‌ಪೆಕ್ಟರ್, ಎಸಿಬಿ ಪೋಲೀಸ್ ಠಾಣೆ ಬಳ್ಳಾರಿ | ಟಿ. ದುರುಗಪ್ಪ, ಸಹಾಯಕ ಆಡಳಿತಾಧಿಕಾರಿ, ವಿಮ್ಸ್ ಬಳ್ಳಾರಿ. | ತನಿಖೆಯಲ್ಲಿದೆ | ಪ್ರಾಥಮಿಕ ತನಿಖೆಯಿಂದ ಪತ್ತೆ ಹಚ್ಚಲಾದ ಆಸ್ತಿ ರೂ 47,39,878/- |
| 156. | ರಾಯಚೂರು | 2017 | 02/2017 13(1)(ಇ) ಸಹಿತ 13(2) ಭ್ರಷ್ಟಾಚಾರ ಪ್ರತಿಬಂಧ್ ಕಾಯ್ದೆ 1988. | 15.06.2017 | ಶ್ರೀ. ಹೆಚ್.ಬಿ.ಸಣಮನಿ ಪಿ.ಐ ಎಸಿಬಿ ಪೋಲೀಸ್ ಠಾಣೆ ರಾಯಚೂರು. | ಬಸವರಾಜ, ಉ:ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ವಿಭಾಗ, ಲೋಕೋಪಯೋಗಿ ಇಲಾಖೆ ಲಿಂಗಸ್ಗೂರು, | ತನಿಖೆಯಲ್ಲಿದೆ | ಅಸಮತೋಲನ ಆಸ್ತಿರೂ. 2,53,119,786=00 210.99% |
| 157. | ರಾಯಚೂರು | 2018 | 01/2018 13(1)(ಇ) ಸಹಿತ 13(2) ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988 | 03.01.2018 | ಶ್ರೀ. ಶ್ರೀಧರ ದೊಡ್ಡಿ ಪಿ.ಐ ಎಸಿಬಿ ಪೋಲೀಸ್ ಠಾಣೆ ರಾಯಚೂರು. | ಶ್ರೀ ಅಮರೇಶ ಬೆಂಚಮರಡಿ, ಪ್ರಭಾರಿ ನೈರ್ಮಲ್ಯ ನಿರೀಕ್ಷಕರು ಹಾಗೂ ಬಿಲ್ ಕಲೆಕ್ಟರ್, ನಗರಸಭೆ ರಾಯಚೂರು, | ತನಿಖೆಯಲ್ಲಿದೆ | ಖ. 1,02,87,300/- 151.28% |
| 158. | ರಾಯಚೂರು | 2018 | 11/2018 13(1)(ಬಿ) ಸಹಿತ 13(2) ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988 [ತಿದ್ದುಪಡಿ-2018] | 03.09.2018 | ಶ್ರೀ. ರವಿನಾಥ ಡಿ.ಹೆಚ್. ಪಿ.ಐ ಎಸಿಬಿ ಪೋಲೀಸ್ ಠಾಣೆ ರಾಯಚೂರು. | ಶ್ರೀ ಶಂಕರ ನಾಯ್ಕ್ ತಂದೆ ಹೀರಾ ನಾಯ್ಕ್ 53 ವರ್ಷ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ರಾಯಚೂರು ಉಪ | ತನಿಖೆಯಲ್ಲಿದೆ | ಖ. 1,29,90,028/- 174 % |

| ಕ್ರ.ಸಂ | ಠಾಣೆ | ವರ್ಷ | ಮೊ.ಸಂ. ಮತ್ತು ಕಲಂ | ಪ್ರಕರಣ ದಾಖಲಾದ ದಿನಾಂಕ | ದೂರುದಾರರು/ ಫಿರ್ಯಾದುದಾರರ ವಿವರ | ಆರೋಪಿತ ಸರ್ಕಾರಿ ನೌರರ ಹೆಸರು ಮತ್ತು ಹುದ್ದೆ. | ಪ್ರಕರಣದ ಹಂತ | ವಶಪಡಿಸಿಕೊಳ್ಳಲಾದ ಹಣ ಮತ್ತು ಆಸ್ತಿ-ಪಾಸ್ತಿ ಎಷ್ಟು |
|---|---|---|---|---|---|---|---|---|
| | | | | | | ವಿಭಾಗ ರಾಯಚೂರು, | | |
| 159. | ಕೊಪ್ಪಳ ಎಸಿಬಿ ಠಾಣೆ. | 2018 | 03/2018 ಕಲಂ : 13(1)(ಇ) ಸಹಿತ 13(2) ಲಂಚ ಪ್ರತಿಬಂಧಕ ಕಾಯ್ದೆ 1988. | 08-03-18 | ಶ್ರೀ ಆರ್.ಎಸ್.ಉಜ್ಜನಕೊಪ್ಪ ಪಿ.ಐ. ಎಸಿಬಿ ಠಾಣೆ, ಕೊಪ್ಪಳ. | ಶ್ರೀ ಪಿ. ವಿಜಯಕುಮಾರ, ಸಹಾಯಕ ಇಂಜಿನಿಯರ್, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಉಪವಿಭಾಗ ಗಂಗಾವತಿ. ಹಾಗೂ ಪಂಚಾಯತ ರಾಜ್ ಇಂಜನಿಯರಿಂಗ್ ಉಪ ವಿಭಾಗ, ಗಂಗಾವತಿ. ತಾ॥ ಗಂಗಾವತಿ. ಜಿ॥ ಕೊಪ್ಪಳ. | ತನಿಖೆಯಲ್ಲಿದೆ | ವಶಪಡಿಸಿಕೊಂಡಿರುವುದಿಲ್ಲ |
| 160. | ಕೊಪ್ಪಳ ಎಸಿಬಿ ಠಾಣೆ. | 2018 | 04/2018 ಕಲಂ : 13(1)(ಇ) ಸಹಿತ 13(2) ಲಂಚ ಪ್ರತಿಬಂಧಕ ಕಾಯ್ದೆ 1988. | 08-03-18 | ಶ್ರೀ ಎಸ್.ಎಸ್.ಬೀಳಗಿ, ಪಿ.ಐ. ಎಸಿಬಿ ಠಾಣೆ, ಕೊಪ್ಪಳ. | ಡಾ॥ ಜೆ.ರಘುನಾಥ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಬಾಣವಾಡಿ ತಾ: ಮಾಗಡಿ ಜಿ: ರಾಮನಗರ. | ತನಿಖೆಯಲ್ಲಿದೆ. | ವಶಪಡಿಸಿಕೊಂಡಿರುವುದಿಲ್ಲ |

ಕರ್ನಾಟಕ ಸರ್ಕಾರ

ಸಂಖ್ಯೆ: ಆನಾಸ 94 ಆನಾಸ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಸುವರ್ಣಸೌಧ, ನೆಲಮಹಡಿ,
ಬೆಳಗಾವಿ, ದಿನಾಂಕ: 18.12. 2018.

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

154
C/S
19/12/18

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಸುವರ್ಣಸೌಧ, ಬೆಳಗಾವಿ.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ನಾರಾಯಣ ಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1669 ಕ್ಕೆ ಉತ್ತರ ನೀಡುವ ಬಗ್ಗೆ.

-----

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ನಾರಾಯಣ ಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1669 ಕ್ಕೆ ಉತ್ತರವನ್ನು ಸಿದ್ಧಪಡಿಸಿ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

ಶಾಖಾಧಿಕಾರಿ(ಪ್ರ),
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1669 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ನಾರಾಯಣ ಗೌಡ |
| ಉತ್ತರಿಸಬೇಕಾದ ದಿನಾಂಕ | : | 19/12/2018. |
| ಉತ್ತರಿಸುವ ಸಚಿವರು | : | ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಗ್ರಾಮಾಂತರ ಪ್ರದೇಶಗಳ ಪಡಿತರ ವಿತರಣೆದಾರರಿಂದ ಪಡಿತರ ಪದಾರ್ಥಗಳನ್ನು ಪಡೆಯಲು ಫಲಾನುಭವಿಗಳು 5–6 ಕಿ.ಮೀ ದೂರದವರೆಗೆ ತಮ್ಮ ದೈನಂದಿನ ಕೆಲಸ ಕಾರ್ಯಗಳನ್ನು ಬಿಟ್ಟು ಹೋಗಬೇಕಾಗಿರುವುದರಿಂದ ಉಂಟಾಗುತ್ತಿರುವ ತೊಂದರೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಲವು ಪ್ರದೇಶಗಳಲ್ಲಿ ಈ ರೀತಿಯ ತೊಂದರೆಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ, ಹೆಚ್ಚು ಪಡಿತರ ಚೀಟಿ ಹೊಂದಿರುವ ಪಡಿತರ ಅಂಗಡಿಗಳಿಂದ ಬೇರ್ಪಡಿಸಿ ಹತ್ತಿರವಿರುವ ಗ್ರಾಮಗಳಿಗೆ ಸ್ಥಳಾಂತರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಈ ಪ್ರಕ್ರಿಯೆಯನ್ನು ಯಾವಾಗ ಪ್ರಾರಂಭಿಸಲಾಗುವುದು (ತಾಲ್ಲೂಕುವಾರು ವಿವರ ನೀಡುವುದು); | ಪಡಿತರ ಚೀಟಿಗಳ ಲಭ್ಯತೆಗನುಗುಣವಾಗಿ ಸಾರ್ವಜನಿಕ ವಿತರಣಾ ಪದ್ಧತಿ ನಿಯಂತ್ರಣ ಆದೇಶ 2016 ರನ್ವಯ ಹೊಸ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅವಕಾಶವಿದೆ. ನಗರ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಕನಿಷ್ಠ 800 ಪಡಿತರ ಚೀಟಿಗಳು ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ 500 ಪಡಿತರ ಚೀಟಿಗಳಿರಬೇಕೆಂದು ತಿಳಿಸಲಾಗಿದೆ.<br><br>ಜಿಲ್ಲಾ ವ್ಯಾಪ್ತಿಯಲ್ಲಿ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಅಗತ್ಯವಿರುವ ಸ್ಥಳಗಳಲ್ಲಿ ಪ್ರಕಟಿಸಲು ಅವಕಾಶ ನೀಡಲಾಗಿದೆ. ಅದರಂತೆಯೇ ರಾಜ್ಯದಲ್ಲಿ ಹೊಸ ಅಂಗಡಿಗಳಿಗೆ ಪ್ರಕಟಣೆ ಹೊರಡಿಸಿ ಅಂಗಡಿಗಳನ್ನು ತೆರೆಯುವ ಪ್ರಕ್ರಿಯೆ ಜಾರಿಯಲ್ಲಿದೆ. ವಿವರಗಳನ್ನು ಲಗತ್ತಿಸಿದೆ. |
| ಇ) | ಹಾಗಿದ್ದಲ್ಲಿ, ಪಡಿತರ ಅಂಗಡಿಗಳನ್ನು ವಿಭಜಿಸಿ ಸ್ಥಳಾಂತರಿಸಲು ಸರ್ಕಾರಕ್ಕೆ ಇರುವ ಅಡೆ–ತಡೆಗಳೇನು (ಪೂರ್ಣ ವಿವರ ನೀಡುವುದು)? | ಸಾರ್ವಜನಿಕ ವಿತರಣಾ ಪದ್ಧತಿ ನಿಯಂತ್ರಣ ಆದೇಶ 2016 ರನ್ವಯ ಅಗತ್ಯಕ್ಕೆ ಅನುಗುಣವಾಗಿ ಹೊಸ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅವಕಾಶವಿದೆ ಹಾಗೂ ಅದರಂತೆಯೇ ಕ್ರಮವಹಿಸಲಾಗುತ್ತಿದೆ. |

ಆನಾಸ 94 ಆನಾಸ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಆನಾಸ 84 ಆರ್‌ಪಿಆರ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಸುವರ್ಣಸೌಧ, ನೆಲಮಹಡಿ,
ಬೆಳಗಾವಿ, ದಿನಾಂಕ: 18.12. 2018.

131
U/S
19/12/18

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಸುವರ್ಣಸೌಧ, ಬೆಳಗಾವಿ.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ ಶಿವಾನಂದ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1590 ಕ್ಕೆ ಉತ್ತರ ನೀಡುವ ಬಗ್ಗೆ.

-----

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ ಶಿವಾನಂದ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1590 ಕ್ಕೆ ಉತ್ತರವನ್ನು ಸಿದ್ಧಪಡಿಸಿ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಶಾಖಾಧಿಕಾರಿ(ಪ್ರ),
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1590
ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್
ಉತ್ತರಿಸಬೇಕಾದ ದಿನಾಂಕ 19.12.2018
ಉತ್ತರಿಸುವ ಸಚಿವರು ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೆಕ್ಕ ಜೋಳವನ್ನು ಸಹ ಬೆಂಬಲ ಬೆಲೆಯಲ್ಲಿ ಖರೀದಿ ಮಾಡಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ; | ಇಲ್ಲ. |
| ಆ) | ಮೆಕ್ಕೆ ಜೋಳದ ಬೆಂಬಲ ಬೆಲೆಯನ್ನು ಕೇಂದ್ರ ಸರ್ಕಾರದವರು ನಿಗದಿಪಡಿಸಿದ್ದರೂ ರಾಜ್ಯ ಸರ್ಕಾರ ಖರೀದಿ ಮಾಡಲು ಯಾವುದೇ ಕ್ರಮ ಕೈಗೊಳ್ಳದೇ ಇರಲು ಕಾರಣಗಳೇನು; | ಕೇಂದ್ರ ಸರ್ಕಾರವು ಮೆಕ್ಕೆ ಜೋಳವನ್ನು ಖರೀದಿಸಲು ಬೆಂಬಲ ಬೆಲೆಯನ್ನು ನಿಗದಿಪಡಿಸಿದ್ದರೂ ಸಹ ಕೇಂದ್ರ ಸರ್ಕಾರದ ಅ.ಸ. ಪತ್ರ ಸಂಖ್ಯೆ: 7-1/2014/ಪಿವೈ/III, ದಿನಾಂಕ: 19-11-2014 ರಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಮೆಕ್ಕೆಜೋಳವನ್ನು ವಿತರಿಸಬೇಕೆಂದು ತಪ್ಪಿದಲ್ಲಿ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಮೆಕ್ಕೆಜೋಳವನ್ನು ಖರೀದಿಸಲು ಅವಕಾಶವಿರುವುದಿಲ್ಲವೆಂದೂ ಹಾಗೂ ಒಂದು ವೇಳೆ ರಾಜ್ಯ ಸರ್ಕಾರವು ಖರೀದಿಸಿದಲ್ಲಿ ಅದರ ಸಂಪೂರ್ಣ ಆರ್ಥಿಕ ಹೊಣೆಯು ರಾಜ್ಯ ಸರ್ಕಾರದ ಮೇಲಿರುವುದಾಗಿ ತಿಳಿಸಲಾಗಿರುತ್ತದೆ. ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಮೆಕ್ಕೆ ಜೋಳವು ಸಾಮಾನ್ಯ ದಿನ ನಿತ್ಯದ ಜನರ ಆಹಾರವಾಗಿಲ್ಲದ ಕಾರಣ ಸಾರ್ವಜನಿಕ ವಿತರಣ ಪದ್ಧತಿಯಡಿಯಲ್ಲಿ ಮೆಕ್ಕೆಜೋಳವನ್ನು ವಿತರಣೆ ಮಾಡುತ್ತಿರುವುದಿಲ್ಲ. ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಪತ್ರ ಮುಖೇನ ಖರೀದಿಸಿದ ಮೆಕ್ಕೆ ಜೋಳವನ್ನು ಅವಶ್ಯವಿರುವ ಬೇರೆ ರಾಜ್ಯಗಳ ಬಳಕೆಗಾಗಲಿ ಅಥವಾ ರಾಜ್ಯದಲ್ಲಿಯೇ ಟೆಂಡರ್ ಮುಖಾಂತರ ಮುಕ್ತ ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಅನುಮತಿ ನೀಡಬೇಕೆಂದು ಕೋರಲಾಗಿದೆ. ಈ ರೀತಿ ಅನುಮತಿ ಬಂದ ನಂತರ ಬೆಂಬಲ ಬೆಲೆ ಯೋಜನೆಯಡಿ ಮೆಕ್ಕೆ ಜೋಳವನ್ನು ಖರೀದಿಸಲು ಕ್ರಮವಹಿಸಲಾಗುವುದು. |
| ಇ) | ರಾಜ್ಯದಲ್ಲಿ ಪ್ರಸ್ತುತ ಮೆಕ್ಕೆ ಜೋಳವನ್ನು ರೈತರು ಹೇರಳವಾಗಿ ಬೆಳೆದಿದ್ದು, ಖರೀದಿ ಮಾಡುವವರು ಯಾರೂ ಇಲ್ಲದಿರುವುದರಿಂದ ಮೆಕ್ಕೆಜೋಳದ ದರ ಕುಸಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಈ) | ಹಾಗಿದ್ದಲ್ಲಿ, ರೈತರ ಹಿತದೃಷ್ಟಿಯಿಂದ ಖರೀದಿ ಕೇಂದ್ರ ಆರಂಭಿಸಲು ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ರಾಜ್ಯದಲ್ಲಿ ಮೆಕ್ಕೆ ಜೋಳವನ್ನು ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ಖರೀದಿಸಲು ಕೇಂದ್ರಗಳನ್ನು ಪ್ರಾರಂಭಿಸಿರುವುದಿಲ್ಲ. |
| ಉ) | ಮೆಕ್ಕೆ ಜೋಳವನ್ನು ಯಾವುದರಲ್ಲಿ ಖರೀದಿಸಲಾಗುವುದು ಹಾಗೂ ಖರೀದಿ ಕೇಂದ್ರಗಳನ್ನು ಎಂದು ಪ್ರಾರಂಭಿಸಲಾಗುವುದು (ವಿವರ ನೀಡುವುದು) | ರಾಜ್ಯದಲ್ಲಿ ಮೆಕ್ಕೆ ಜೋಳವನ್ನು ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ಖರೀದಿಸುವ ಹಾಗೂ ಖರೀದಿ ಕೇಂದ್ರಗಳನ್ನು ಪ್ರಾರಂಭಿಸುವ ಯಾವುದೇ ಪ್ರಕ್ರಿಯೆಯನ್ನು ಕೈಗೊಂಡಿರುವುದಿಲ್ಲ. |

ಆನಾಸ 84 ಆರ್‌ಪಿಆರ್ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಆನಾಸ 92 ಆನಾಸ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಸುವರ್ಣಸೌಧ, ನೆಲಮಹಡಿ,
ಬೆಳಗಾವಿ, ದಿನಾಂಕ: 18.12. 2018.

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

88

415
19/12/18

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಸುವರ್ಣಸೌಧ, ಬೆಳಗಾವಿ.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭೆ ಸದಸ್ಯರಾದ ಡಾ. ಉಮೇಶ ಜಿ ಜಾಧವ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1685 ಕ್ಕೆ ಉತ್ತರ ನೀಡುವ ಬಗ್ಗೆ.

-----

ಮಾನ್ಯ ವಿಧಾನಸಭೆ ಸದಸ್ಯರಾದ ಡಾ. ಉಮೇಶ ಜಿ ಜಾಧವ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1685 ಕ್ಕೆ ಉತ್ತರವನ್ನು ಸಿದ್ಧಪಡಿಸಿ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

ಶಾಖಾಧಿಕಾರಿ(ಪ್ರ),
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1685 |
| ವಿಧಾನ ಸಭೆ ಸದಸ್ಯರ ಹೆಸರು | : | ಡಾ॥ ಉಮೇಶ್ ಜಿ. ಜಾಧವ್ |
| ಉತ್ತರಿಸಬೇಕಾದ ದಿನಾಂಕ | : | 19/12/2018 |
| ಉತ್ತರಿಸುವ ಸಚಿವರು | : | ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕು ವ್ಯಾಪ್ತಿಯಲ್ಲಿರುವ ನ್ಯಾಯಬೆಲೆ ಅಂಗಡಿಗಳು ಗ್ರಾಮ ಹಾಗೂ ತಾಂಡಗಳಿಂದ ಬಹಳಷ್ಟು ದೂರವಿರುವುದರಿಂದ ಸಾರ್ವಜನಿಕರಿಗೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಲವು ಗ್ರಾಮ ಮತ್ತು ತಾಂಡಾಗಳಲ್ಲಿ ಸಮಸ್ಯೆಯಾಗಿರುವುದು ಗಮನಕ್ಕೆ ಬಂದಿದೆ. |
| ಆ) | ಸರ್ಕಾರವು ನೀಡಿದ ವಿನಾಯಿತಿ ಅಡಿಯಲ್ಲಿ ಬರುವ ಗ್ರಾಮ/ತಾಂಡಗಳ ಸಮೀಕ್ಷೆ ಮಾಡಲಾಗಿದೆಯೇ; ಮಾಡಿದ್ದಲ್ಲಿ ಅನುಮೋದನೆಗೆ ಬಾಕಿ ಇರುವ ಪ್ರಸ್ತಾವನೆಗಳು ಎಷ್ಟು; ಅನುಮೋದನೆಗೆ ಸಲ್ಲಿಸಬೇಕಾದ ಪ್ರಸ್ತಾವನೆಗಳು ಎಷ್ಟು; | ಚಿಂಚೋಳಿ ತಾಲ್ಲೂಕಿನ ವಿವಿಧ ಗ್ರಾಮ/ತಾಂಡಗಳನ್ನು ಸಮೀಕ್ಷೆ ಮಾಡಲಾಗಿದ್ದು, ವಿಶೇಷ ಪ್ರಕರಣದಡಿ ಒಟ್ಟು 33 ನ್ಯಾಯಬೆಲೆ ಅಂಗಡಿಗಳಿಗೆ ದಿನಾಂಕ: 14.09.2015ರಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಈ ಎಲ್ಲ 33 ಪ್ರಸ್ತಾವನೆಗಳು ಬಾಕಿ ಇರುತ್ತವೆ. ಇದರ ವಿರುದ್ಧ ದಿನಾಂಕ: 09.10.2015ರಂದು ಅಂದಿನ ಆಯುಕ್ತರು ಹಾಗೂ ಮೇಲ್ಮನವಿ ಪ್ರಾಧಿಕಾರ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ನ್ಯಾಯಾಲಯದಿಂದ ತಡೆಯಾಜ್ಞೆಯನ್ನು ನೀಡಲಾಗಿತ್ತು. ತದನಂತರ ದಿನಾಂಕ: 14.09.2015ರಂದು ಜಿಲ್ಲಾಧಿಕಾರಿಗಳು ಕಲಬುರಗಿ ರವರು ಹೊರಡಿಸಿದ ಪ್ರಕಟಣೆಯನ್ನು ದಿನಾಂಕ: 29.11.2018ರಂದು ರದ್ದುಪಡಿಸಿರುತ್ತಾರೆ. |
| ಇ) | ಕಾಲಮಿತಿಯಲ್ಲಿ ಅನುಮೋದನೆ ನೀಡಿದರೆ ಸಾರ್ವಜನಿಕರಿಗೆ ಅನುಕೂಲವಾಗುವುದಿಲ್ಲವೇ; ವಿಳಂಬಕ್ಕೆ ಹೊಣೆಗಾರರು ಯಾರು? | ಹೌದು<br>ಆದರೆ ಚಿಂಚೋಳಿ ತಾಲ್ಲೂಕಿನಲ್ಲಿ ಒಟ್ಟು 33 ಹೊಸ ನ್ಯಾಯಬೆಲೆ ಅಂಗಡಿಗಳಿಗೆ ಅರ್ಜಿ ಆಹ್ವಾನಿಸಿ ಪ್ರಕಟಣೆ ಹೊರಡಿಸಿದ್ದರ ವಿರುದ್ಧವಾಗಿ ದಿನಾಂಕ: 09.10.2015ರಂದು ಅಂದಿನ ಆಯುಕ್ತರು ಹಾಗೂ ಮೇಲ್ಮನವಿ ಪ್ರಾಧಿಕಾರ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ನ್ಯಾಯಾಲಯದಿಂದ ತಡೆಯಾಜ್ಞೆಯನ್ನು ನೀಡಲಾಗಿತ್ತು. ತದನಂತರ ದಿನಾಂಕ: 14.09.2015ರಂದು ಜಿಲ್ಲಾಧಿಕಾರಿಗಳು ಕಲಬುರಗಿ ರವರು ಹೊರಡಿಸಿದ ಪ್ರಕಟಣೆಯನ್ನು ದಿನಾಂಕ: 29.11.2018ರಂದು ರದ್ದುಪಡಿಸಿರುತ್ತಾರೆ.<br>ಹಾಗಾಗಿ ಈ ಹಿಂದೆ ಹೊರಡಿಸಲಾಗಿದ್ದ ಪ್ರಕಟಣೆಯೂ ರದ್ದಾಗಿದ್ದು, ಈಗ ಕರ್ನಾಟಕ ಅಗತ್ಯ ವಸ್ತುಗಳ (ಸಾ.ವಿ.ಪ) ನಿಯಂತ್ರಣ ಆದೇಶ 2016ರ ಪ್ರಕಾರ ಈ 33 ನ್ಯಾಯಬೆಲೆ ಅಂಗಡಿಗಳನ್ನು ಹೊಸದಾಗಿ ಪ್ರಾರಂಭಿಸಲು ಪುನಃ ಪ್ರಕಟಣೆ ಹೊರಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಆನಾಸ 92 ಆನಾಸ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 300 ಸಿಎಲ್ಎಸ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

184
415
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು-560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಸಂಜೀವ್ ಮಠದೂರ್ (ಪುತ್ತೂರ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1628 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಸಂಜೀವ್ ಮಠದೂರ್ (ಪುತ್ತೂರ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1628 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಸಂಜೀವ್ ಮಠಂದೂರ್**
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1628**
**ಉತ್ತರಿಸಬೇಕಾದ ದಿನಾಂಕ : 19.12.2018**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ರಾಜ್ಯದ ರೈತರ ಕೃಷಿ ಸಾಲ ಮನ್ನಾ ಆಗಿದೆಯೇ; (ವಿವರ ನೀಡುವುದು) | **ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ದಿನಾಂಕ: 05.07.2018ರಂದು ರಾಜ್ಯ ಸರ್ಕಾರವು ಮಂಡಿಸಿದ ಆಯವ್ಯಯದಲ್ಲಿ ರೈತರ ಬೆಳೆ ಸಾಲವನ್ನು ಮನ್ನಾ ಮಾಡುವ ಯೋಜನೆಯನ್ನು ಘೋಷಿಸಲಾಯಿತು. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯ ಕ್ರಮಗಳನ್ನು ನಿರಂತರವಾಗಿ ಜಾರಿಮಾಡಲಾಗುತ್ತಿದೆ.<br><br>ದೊಡ್ಡಬಳ್ಳಾಪುರ ಮತ್ತು ಸೇಡಂ ತಾಲ್ಲೂಕುಗಳಲ್ಲಿ ಪೈಲೆಟ್ ಯೋಜನೆ ಪ್ರಾರಂಭವಾಗಿರುತ್ತದೆ. ಈ ತಾಲ್ಲೂಕುಗಳಲ್ಲಿ ಸಾಲ ಮನ್ನಾ ಯೋಜನೆಗೆ ರೂ.50 ಕೋಟಿ ಬಿಡುಗಡೆ ಮಾಡಲಾಗಿದೆ. ಈವರೆಗೆ 627 ಖಾತೆಗಳಿಗೆ ರೂ.2.92 ಕೋಟಿಗಳಷ್ಟು ಬೆಳೆ ಸಾಲ ಮನ್ನಾದ ಲಾಭ ತಲುಪಿದೆ.<br><br>ಬ್ಯಾಂಕುಗಳಿಂದ ಮಾಹಿತಿಯನ್ನು ಸಂಗ್ರಹಿಸುವ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ. ನಂತರ ಅರ್ಹ ರೈತರನ್ನು ಗುರುತಿಸುವ ಪ್ರಕ್ರಿಯೆಯನ್ನು ಎಲ್ಲಾ ಜಿಲ್ಲೆಗಳಲ್ಲಿಯೂ ಪ್ರಾರಂಭಿಸಲಾಗುವುದು. ಅರ್ಹ ರೈತರನ್ನು ಗುರುತಿಸಿದ ನಂತರ ಪರಿಶೀಲಿಸಿದ ಮೇಲೆ ಸಾಲ ಮನ್ನಾದ ಮೊತ್ತವು ತೀರ್ಮಾನವಾಗುವುದು.<br>**ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018–19ನೇ ಸಾಲಿನ ಆಯವ್ಯಯ ಭಾಷಣದ ಮೇಲಿನ ಚರ್ಚೆಯ ಸಂಧರ್ಭದಲ್ಲಿ ಮಾನ್ಯ ಮುಖ್ಯ ಮಂತ್ರಿಗಳು ಘೋಷಿಸಿದಂತೆ ಸಹಕಾರ ಸಂಘಗಳಲ್ಲಿ ರೈತರು ಬೆಳೆ ಸಾಲ ಪಡೆದು ದಿ.10–7–2018 ಕ್ಕೆ ಹೊರಬಾಕಿ ಹೊಂದಿರುವ ಸಾಲದಲ್ಲಿ ಪ್ರತೀ ಕುಟುಂಬಕ್ಕೆ ಗರಿಷ್ಟ ರೂ. 1.00 ಲಕ್ಷದವರೆಗಿನ ಸಾಲವನ್ನು ಮನ್ನಾ ಮಾಡಲು ದಿ.14–8–2018 ರಂದು ಸರ್ಕಾರ ಆದೇಶ ಹೊರಡಿಸಿದೆ. ಇದಕ್ಕಾಗಿ ಸಾಲಗಾರರ ವಿವರಗಳನ್ನು ಪರಿಶೀಲಿಸಿ ತಂತ್ರಾಂಶದಲ್ಲಿ ಅಳವಡಿಸಲಾಗುತ್ತಿದ್ದು ಪರಿಶೀಲನೆಯ ನಂತರ ಅರ್ಹ ರೈತರಿಗೆ ಸಾಲ ಮನ್ನಾ ಮೊತ್ತ ಬಿಡುಗಡೆ ಮಾಡಲಾಗುತ್ತದೆ. ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಇಲ್ಲಿಯವರೆಗೆ ರೂ.800.00 ಕೋಟಿ ಸಾಲ ಮನ್ನಾ ಮೊತ್ತವನ್ನು ಸರ್ಕಾರ ಮಂಜೂರು ಮಾಡಿ ಬಿಡುಗಡೆ ಮಾಡಿದ್ದು, ಈ ಪೈಕಿ ಅರ್ಹ ಇಲ್ಲಿಯವರೆಗೆ 13,735 ಫಲಾನುಭವಿಗಳಿಗೆ ರೂ.72.47 ಕೋಟಿ ಬಿಡುಗಡೆ ಮಾಡಲಾಗಿದೆ. |

| | | |
|---|---|---|
| ಆ) | ರೈತರು ಸಹಕಾರಿ ಸಂಘದಿಂದ ಮಾತ್ರ ಸೌಲಭ್ಯ ಪಡೆಯಬಹುದೇ ಅಥವಾ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದಲೂ ಸೌಲಭ್ಯ ದೊರೆಯುವುದೆಯೇ; (ವಿವರ ನೀಡುವುದು) | ಆರ್ಥಿಕ ಇಲಾಖೆಯಿಂದ ಹೊರಡಿಸಿದ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 08 ಸಿಏಎಂ (ಭಾ) ದಿ.6-9-2018 ರ ಆದೇಶದನ್ವಯ ರಾಜ್ಯದ ಸಹಕಾರ ಸಂಸ್ಥೆ/ಬ್ಯಾಂಕುಗಳಿಗೆ ಘೋಷಿಸಿರುವ ಬೆಳೆ ಸಾಲ ಮನ್ನಾ ಯೋಜನೆಯ ಫಲಾನುಭವಿಗಳು ರಾಷ್ಟ್ರೀಕೃತ ಬ್ಯಾಂಕು ಗಳ ಸಾಲ ಮನ್ನಾ ಸೌಲಭ್ಯ ಪಡೆಯಲು ಅವಕಾಶ ಇರುವುದಿಲ್ಲ. |
| ಇ) | ರಾಜ್ಯದ ಒಟ್ಟು ಎಷ್ಟು ರೈತರು ಸಾಲ ಮನ್ನಾ ಸೌಲಭ್ಯ ಪಡೆದಿದ್ದಾರೆ; | **ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಪ್ರಾಯೋಗಿಕವಾಗಿ ದೊಡ್ಡಬಳ್ಳಾಪುರ ಮತ್ತು ಸೇಡಂ ತಾಲ್ಲೂಕುಗಳಲ್ಲಿ ಯೋಜನೆ ಅನುಷ್ಠಾನವಾಗುತ್ತಿದೆ. ಈ ತಾಲ್ಲೂಕುಗಳಲ್ಲಿ ಸಾಲ ಮನ್ನಾ ಯೋಜನೆಗೆ ರೂ.50 ಕೋಟಿ ಬಿಡುಗಡೆ ಮಾಡಲಾಗಿದೆ. ಈವರೆಗೆ 627 ಖಾತೆಗಳಿಗೆ ರೂ.2.92 ಕೋಟಿಗಳಷ್ಟು ಬೆಳೆ ಸಾಲ ಮನ್ನಾದ ಲಾಭ ತಲುಪಿದೆ.<br>**ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳಲ್ಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಈ ಯೋಜನೆಯಲ್ಲಿ ಅಂದಾಜು 20.38 ಲಕ್ಷ ರೈತರಿಗೆ ಸಾಲ ಮನ್ನಾ ಪ್ರಯೋಜನೆ ದೊರೆಯಲಿದ್ದು, ಇದುವರೆಗೆ 13735 ರೈತರಿಗೆ ಸಂಬಂಧಿಸಿದಂತೆ ರೂ.72.47 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ. |
| ಈ) | ಸಾಲ ಮನ್ನಾದ ಮೊತ್ತವೆಷ್ಟು? (ವಿವರ ನೀಡುವುದು) | **ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಬ್ಯಾಂಕುಗಳಿಂದ ಮಾಹಿತಿಯನ್ನು ಸಂಗ್ರಹಿಸುವ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ. ನಂತರ ಅರ್ಹ ರೈತರನ್ನು ಗುರುತಿಸುವ ಪ್ರಕ್ರಿಯೆಯನ್ನು ಎಲ್ಲಾ ಜಿಲ್ಲೆಗಳಲ್ಲಿಯೂ ಪ್ರಾರಂಭಿಸಲಾಗುವುದು. ಅರ್ಹ ರೈತರನ್ನು ಗುರುತಿಸಿದ ನಂತರ ಪರಿಶೀಲಿಸಿದ ಮೇಲೆ ಸಾಲ ಮನ್ನಾದ ಮೊತ್ತವು ತೀರ್ಮಾನವಾಗುವುದು. ದಿನಾಂಕ: 24.08.2018ರಂದು ಅನುಮೋದಿಸಿದ ಸಚಿವ ಸಂಪುಟ ಟಿಪ್ಪಣಿಯ ಪ್ರಕಾರ ಈ ಯೋಜನೆಯ ಆರ್ಥಿಕ ವೆಚ್ಚ ರೂ. 30,163 ಕೋಟಿಗಳಾಗಿರುತ್ತದೆ ಎಂದು ಅಂದಾಜಿಸಲಾಗಿದೆ. (ಯೋಜನೆಯ ಬಡ್ಡಿಯ ಅಂದಾಜು ಮೊತ್ತವು ಸೇರಿರುತ್ತದೆ)<br>**ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳಲ್ಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಈ ಯೋಜನೆಯಲ್ಲಿ ಅಂದಾಜು ರೂ.9448.62 ಕೋಟಿಗಳ ಸಾಲ ಮನ್ನಾ ಪ್ರಯೋಜನೆ ದೊರೆಯಲಿದ್ದು, ಇದುವರೆಗೆ ರೂ.72.47 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |

ಸಿಓ 300 ಸಿಎಲ್‌ಎಸ್ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.

## ಕರ್ನಾಟಕ ಸರ್ಕಾರ

ಸಂಖ್ಯೆ: ಆನಾಸ 267 ಡಿಆರ್‌ಎ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಸುವರ್ಣಸೌಧ, ನೆಲಮಹಡಿ,
ಬೆಳಗಾವಿ, ದಿನಾಂಕ: 18.12. 2018.

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

210
415
19/12/18

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಸುವರ್ಣಸೌಧ, ಬೆಳಗಾವಿ.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಉಮೇಶ ವಿಶ್ವನಾಥ್ ಕತ್ತಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1623 ಕ್ಕೆ ಉತ್ತರ ನೀಡುವ ಬಗ್ಗೆ.

-----

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಉಮೇಶ ವಿಶ್ವನಾಥ್ ಕತ್ತಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1623 ಕ್ಕೆ ಉತ್ತರವನ್ನು ಸಿದ್ಧಪಡಿಸಿ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಶಾಖಾಧಿಕಾರಿ(ಪ್ರ),
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

AS

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1623 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಉಮೇಶ್ ವಿಶ್ವನಾಥ್ ಕತ್ತಿ |
| ಉತ್ತರಿಸಬೇಕಾದ ದಿನಾಂಕ | : | 19/12/2018. |
| ಉತ್ತರಿಸುವ ಸಚಿವರು | : | ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಡ ಕುಟುಂಬಗಳಿಗೆ ಎಲ್.ಪಿ.ಜಿ ಸಂಪರ್ಕ ಕಲ್ಪಿಸುವ ದೃಷ್ಟಿಯಿಂದ ಸರ್ಕಾರವು "ಅನಿಲ ಭಾಗ್ಯ" ಯೋಜನೆಯನ್ನು ಜಾರಿಗೆ ತಂದು ಆಯ್ಕೆಯಾದ ಫಲಾನುಭವಿಗಳಿಗೆ ಅನಿಲ ಸಂಪರ್ಕ ಕೊಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ.<br>ಮುಖ್ಯಮಂತ್ರಿ ಅನಿಲ ಭಾಗ್ಯ ಯೋಜನೆಯಡಿಯಲ್ಲಿ, ಪ್ರಾಥಮಿಕ ಹಂತದಲ್ಲಿ 1ಲಕ್ಷ ಫಲಾನುಭವಿಗಳಿಗೆ ಅನಿಲ ಸಂಪರ್ಕವನ್ನು ನೀಡುವ ಪ್ರಕ್ರಿಯೆ ಜಾರಿಯಲ್ಲಿದೆ. |
| ಆ) | ಸದರಿ ಯೋಜನೆಯ ಮಾನದಂಡಗಳೇನು; ಎಷ್ಟು ಕುಟುಂಬಗಳನ್ನು ಆಯ್ಕೆ ಮಾಡಲಾಗಿತ್ತು; ಎಷ್ಟು ಕುಟುಂಬಗಳಿಗೆ ಇಲ್ಲಿಯವರೆಗೆ ಅನಿಲ ಸಪಂರ್ಕ ಒದಗಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಆನಾಸ 347 ಡಿಆರ್ಎ 2013 (ಭಾ-4) ಬೆಂಗಳೂರು, ದಿನಾಂಕ: 31.10.2017 ರಂತೆ ನಡವಳಿ ಮತ್ತು ಮಾರ್ಗಸೂಚಿಯಂತೆ ಮಾನದಂಡಗಳು:<br>1. ಆದ್ಯತಾ ಕುಟುಂಬಗಳು ಅಥವಾ ಅಂತ್ಯೋದಯ ಪಡಿತರ ಚೀಟಿದಾರರು ಅನಿಲ ಸಂಪರ್ಕವನ್ನು ಹೊಂದದೇ ಇರುವಂತಹ ಕುಟುಂಬಗಳು.<br>2. ಯಾವುದೇ ಅನಿಲ ಸಂಪರ್ಕವನ್ನು ಹೊಂದಿರದ ನೊಂದಾಯಿತ ಕಟ್ಟಡ ಕಾರ್ಮಿಕರು.<br>ಇದುರವರೆಗೆ ರಾಜ್ಯದ ಮುಖ್ಯಮಂತ್ರಿ ಅನಿಲ ಭಾಗ್ಯ ಮೊದಲ ಹಂತದ 1 ಲಕ್ಷ ಫಲಾನುಭವಿಗಳ ಗುರಿಯಲ್ಲಿ ಆಯ್ಕೆಯಾದ 39348 ಕುಟುಂಬಗಳಿಗೆ ಅನಿಲ ಸಂಪರ್ಕಗಳನ್ನು ನೀಡಲಾಗಿದೆ. (ಜಿಲ್ಲಾವಾರು ಮಾಹಿತಿಯನ್ನು ಅನುಬಂಧ 1ರಲ್ಲಿ ಲಗತ್ತಿಸಿದೆ.) |
| ಇ) | ಈ ಯೋಜನೆಯಲ್ಲಿ ಹುಕ್ಕೇರಿ ವಿಧಾನಸಭಾ ಮತಕ್ಷೇತ್ರಕ್ಕೆ ಸರ್ಕಾರದ ನಿರ್ದೇಶನ ಪ್ರಕಾರ ಎಷ್ಟು ಕುಟುಂಬಗಳನ್ನು ಆಯ್ಕೆ ಮಾಡಲಾಗಿತ್ತು; ಇಲ್ಲಿಯವರೆಗೆ ಎಷ್ಟು ಕುಟುಂಬಗಳಿಗೆ ಸಂಪರ್ಕ ಕಲ್ಪಿಸಲಾಗಿದೆ; ಇನ್ನೂ ಎಷ್ಟು ಜನರಿಗೆ ಸಂಪರ್ಕ ನೀಡುವುದು ಬಾಕಿ ಇದೆ; (ವಿವರ ನೀಡುವುದು) | ಹುಕ್ಕೇರಿ ವಿಧಾನಸಭಾ ಮತಕ್ಷೇತ್ರಕ್ಕೆ ಪ್ರಾಥಮಿಕ ಹಂತದಲ್ಲಿ 765 ಫಲಾನುಭವಿಗಳ ಗುರಿಯನ್ನು ನಿಗದಿಪಡಿಸಿದ್ದು, ಇಲ್ಲಿಯವರೆಗೆ 180 ಫಲಾನುಭವಿಗಳಿಗೆ ಅನಿಲ ಸಂಪರ್ಕವನ್ನು ಒದಗಿಸಲಾಗಿದೆ. ಇನ್ನು 589 ಅರ್ಹ ಕುಟುಂಬಗಳಿಗೆ ಅನಿಲ ಸಂಪರ್ಕವನ್ನು ನೀಡಲು ಬಾಕಿ ಇದ್ದು, ಈ ಕಾರ್ಯವು ಪ್ರಗತಿಯಲ್ಲಿದೆ. |
| ಈ) | ಬಾಕಿ ಉಳಿದ ಕುಟುಂಬಗಳಿಗೆ ಅನಿಲ ಸಂಪರ್ಕ ಒದಗಿಸಲು ಸರ್ಕಾರವು ಹಾಕಿಕೊಂಡಿರುವ ಕಾಲಮಿತಿಯೇನು? (ವಿವರ ನೀಡುವುದು) | |

ಆನಾಸ 267 ಡಿಆರ್ಎ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

As on 14.12.2018

| District Name | MMABY PHASE I TARGET | SV GENERATED BY DISTRIBUTOR | STOVE COLLECTED BY THE BENEFICIARIES | INSTALLATION COMPLETED BY DISTRIBUTOR |
|---|---|---|---|---|
| BAGALKOTE | 52024 | 3213 | 3049 | 2543 |
| BELAGAVI | 118849 | 5888 | 4044 | 3431 |
| BALLARI | 43024 | 2824 | 1604 | 2793 |
| BIDAR | 45527 | 2480 | 2327 | 1772 |
| VIJAYAPURA | 64139 | 4316 | 2795 | 2664 |
| CHAMARAJANAGARA | 24111 | 836 | 600 | 458 |
| CHIKKAMAGALURU | 21859 | 1185 | 1104 | 964 |
| CHITRADURGA | 34151 | 1758 | 1381 | 812 |
| DAKSHINA KANNADA | 15858 | 1203 | 1106 | 819 |
| DAVANAGERE | 8472 | 814 | 809 | 803 |
| DHARWAR | 17921 | 1329 | 1272 | 1203 |
| GADAG | 35613 | 2139 | 2039 | 1870 |
| KALABURAGI | 78450 | 3071 | 2806 | 2693 |
| HASSAN | 38000 | 2714 | 2264 | 2109 |
| HAVERI | 42802 | 3096 | 2810 | 2509 |
| KODAGU | 8245 | 31 | 24 | 22 |
| KOLAR | 19610 | 888 | 834 | 681 |
| KOPPAL | 52059 | 2339 | 2159 | 1251 |
| MANDYA | 28551 | 1897 | 1464 | 1506 |
| MYSURU | 6322 | 461 | 427 | 431 |
| RAICHUR | 50892 | 1100 | 806 | 988 |
| TUMAKURU | 50536 | 3368 | 3169 | 3257 |
| UDUPI | 11059 | 668 | 593 | 517 |
| UTTARA KANNADA | 36738 | 601 | 493 | 459 |
| CHIKKABALLAPURA | 32185 | 1929 | 1284 | 1137 |
| RAMANAGARA | 19200 | 902 | 380 | 761 |
| YADGIR | 43797 | 962 | 876 | 895 |
| **TOTAL** | **999994** | **52012** | **42519** | **39348** |

ಕರ್ನಾಟಕ ಸರ್ಕಾರ

**ಸಂಖ್ಯೆ:** ಸಿಒ 301 ಸಿಎಲ್‌ಎಸ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

227
CLS
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು–560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಯಶವಂತರಾಯನಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1663 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಯಶವಂತರಾಯನಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1663 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,
Dhanjay
**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

<u>**ಕರ್ನಾಟಕ ವಿಧಾನ ಸಭೆ**</u>

**ಮಾನ್ಯ ವಿಧಾನ ಸಭೆ ಸದಸ್ಯರು** : ಶ್ರೀ ಯಶವಂತರಾಯಗೌಡ ವಿಠಲಗೌಡ ಪಾಟೀಲ್ (ಇಂಡಿ)

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1663

**ಉತ್ತರಿಸಬೇಕಾದ ದಿನಾಂಕ** : 19.12.2018

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರವು ಜಾರಿಗೆ ತಂದಿರುವ ಕಾಯಕ ಯೋಜನೆಯ ರೂಪುರೇಷೆಗಳೇನು; (ವಿವರ ನೀಡುವುದು) | **2018-19 ನೇ ಸಾಲಿನಲ್ಲಿ ಜಾರಿಗೆ ತಂದಿರುವ ಕಾಯಕ ಯೋಜನೆ ರೂಪು ರೇಷೆಗಳು ಈ ಕೆಳಗಿನಂತಿವೆ.**<br>1. ಸಹಕಾರ ಸಂಸ್ಥೆಗಳಿಂದ ರಚಿಸಲ್ಪಡುವ ಸ್ವಸಹಾಯ ಗುಂಪುಗಳ ಸದಸ್ಯರ ಕೌಶಲ್ಯಾಭಿವೃದ್ಧಿ ಮತ್ತು ಉದ್ಯಮಶೀಲತೆಯನ್ನು ವೃದ್ಧಿಗೊಳಿಸುವುದರ ಮೂಲಕ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸಿ, ಆದಾಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಡಿಸಿಸಿ ಬ್ಯಾಂಕುಗಳು, ಅರ್ಬನ್ ಬ್ಯಾಂಕುಗಳು ಮಹಿಳಾ ಸಹಕಾರ ಬ್ಯಾಂಕುಗಳು ಸಾಲ ವಿತರಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.<br>2. ಪ್ರತಿ ಸ್ವಸಹಾಯ ಗುಂಪಿಗೆ ಗರಿಷ್ಠ ರೂ.10.00ಲಕ್ಷದವರೆವಿಗೆ ಸಾಲವನ್ನು ಒದಗಿಸಲಾಗುವುದು. ರೂ.5.00ಲಕ್ಷದವರೆಗಿನ ಸಾಲಕ್ಕೆ ಶೂನ್ಯ ಬಡ್ಡಿ ಮತ್ತು ರೂ.5.00ರಿಂದ ರೂ.10.00ಲಕ್ಷಗಳವರೆಗಿನ ಸಾಲಕ್ಕೆ ಶೇ.4ರ ಬಡ್ಡಿ ಅನ್ವಯವಾಗತಕ್ಕದ್ದು.<br>3. ಯೋಜನೆಯ ಅನುಷ್ಠಾನಕ್ಕಾಗಿ ಸಹಕಾರ ಸಂಘಗಳ ಉಪ ನಿಬಂಧಕರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಿದ್ದು, ಈ ಸಮಿತಿಯು ಈ ಯೋಜನೆಯಡಿ ಸಂಘಗಳನ್ನು ಆಯ್ಕೆ ಮಾಡುವುದು, ಯೋಜನಾ ಚಟುವಟಿಕೆ ಮತ್ತು ಉತ್ಪನ್ನಗಳನ್ನು ಗುರುತಿಸುವುದು, ಫಲಾನುಭವಿಗಳ ಕೌಶಲ್ಯ ವೃದ್ಧಿಸಿ ಉದ್ಯಮಶೀಲತೆಯನ್ನು ಹೆಚ್ಚಿಸಿಕೊಳ್ಳಲು ತರಬೇತಿಗೆ ವ್ಯವಸ್ಥೆ ಕಲ್ಪಿಸುವುದು, ಕಾಯಕ ಯೋಜನೆಯಡಿ ತಯಾರಿಸಿದ ಉತ್ಪನ್ನಗಳನ್ನು ಏಕರೂಪದ ಬ್ರಾಂಡಿಂಗ್ ಮಾಡುವ ಮೂಲಕ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸುವ ಜವಾಬ್ದಾರಿಯನ್ನು ಹೊಂದಿರುತ್ತದೆ.<br>4. ಆಯವ್ಯಯ ಅವಕಾಶದ ಶೇ.10ರಷ್ಟು ತರಬೇತಿ ವೆಚ್ಚಕ್ಕೆ, ಶೇ.20ರಷ್ಟು ಮಾರುಕಟ್ಟೆ ವ್ಯವಸ್ಥೆಗೆ ಹಾಗೂ ಉಳಿದ 70ರಷ್ಟನ್ನು ಬಡ್ಡಿ ಸಹಾಯಧನಕ್ಕಾಗಿ ಅನುದಾನ ಒದಗಿಸುವುದು. |
| ಆ) | ಈ ಯೋಜನೆಯ ಸೌಲಭ್ಯವನ್ನು ಎಷ್ಟು ಸ್ವ ಸಹಾಯ ಗುಂಪು ಅಥವಾ ಸದಸ್ಯರಿಗೆ ನೀಡಲಾಗುವುದು; (ಜಿಲ್ಲಾವಾರು ವಿವರ ನೀಡುವುದು) | ಈ ಯೋಜನೆಯಡಿ 3000 ಸ್ವಸಹಾಯ ಗುಂಪುಗಳಿಗೆ ಸಾಲ ಒದಗಿಸಲು ಉದ್ದೇಶಿಸಲಾಗಿದೆ. |
| ಇ) | ಈ ಸೌಲಭ್ಯ ಪಡೆಯಲು ಅರ್ಹತೆಗಳೇನು; | ರಿಯಾಯಿತಿ ಬಡ್ಡಿದರದಲ್ಲಿ ಸಾಲ ಸೌಲಭ್ಯ ಪಡೆಯಲು ಸ್ವಸಹಾಯ ಗುಂಪುಗಳು ಈ ಕೆಳಕಂಡ ಅರ್ಹತೆ ಹೊಂದಿರತಕ್ಕದ್ದು.<br>1. 10ಕ್ಕಿಂತ ಹೆಚ್ಚು ಮತ್ತು 20ಕ್ಕಿಂತ ಕಡಿಮೆ ಸದಸ್ಯರನ್ನು ಹೊಂದಿರುವ ಸ್ವಸಹಾಯ ಗುಂಪುಗಳ ಸದಸ್ಯರ ಪೈಕಿ ಶೇ.70 ಕ್ಕಿಂತ ಹೆಚ್ಚಿನ ಸದಸ್ಯರು ಬಿಪಿಎಲ್ ಸದಸ್ಯರಾಗಿರತಕ್ಕದ್ದು. |

| | | |
|---|---|---|
| — | | 2. ಪ್ರತಿ ಜಿಲ್ಲೆಯಲ್ಲಿ ಸ್ವಂತ ಉದ್ಯೋಗ ಕೈಗೊಂಡು ನಿರಂತರ ಆದಾಯ ಗಳಿಸಲು ಉದ್ದೇಶಿಸಿರುವ ಸ್ವಸಹಾಯ ಗುಂಪುಗಳನ್ನು ಹೊಸದಾಗಿ ರಚನೆ ಮಾಡಬಹುದು ಅಥವಾ ಈಗಾಗಲೇ ಇರುವ ಗುಂಪುಗಳು ಈ ಉದ್ದೇಶವನ್ನು ಹೊಂದಿರತಕ್ಕದ್ದು.<br>3. ಸ್ವಸಹಾಯ ಗುಂಪುಗಳ ಎಲ್ಲಾ ಸದಸ್ಯರ ಗುರುತಿನ ಚೀಟಿ, ಆಧಾರ್ ಸಂಖ್ಯೆ ಯೋಜನಾ ಘಟಕದ ಫೋಟೋ ಕಾಪಿಗಳು ಮುಂತಾದ ವಿವರಗಳನ್ನೊಳಗೊಂಡ ದಾಖಲಾತಿಗಳನ್ನು ಸಾಲ ಒದಗಿಸುವ ಬ್ಯಾಂಕುಗಳಿಗೆ ಸಲ್ಲಿಸಬೇಕಾಗುತ್ತದೆ.<br>4. ಸ್ವಸಹಾಯ ಗುಂಪುಗಳು ಬ್ಯಾಂಕುಗಳು ನಿಗದಿಪಡಿಸಿದ ಗಡುವಿನ ದಿನಾಂಕದಿಂದ 30 ದಿನದೊಳಗಾಗಿ ಸಾಲ ಮರುಪಾವತಿಸಬೇಕಾಗುತ್ತದೆ. |
| ಈ) | ಈ ಯೋಜನೆಯಲ್ಲಿ ವಿಧಿಸುವ ಬಡ್ಡಿದರ ಹಾಗೂ ನೀಡುವ ಗರಿಷ್ಟ ಸಾಲ ಎಷ್ಟು; | ಈ ಯೋಜನೆಯಡಿಯಲ್ಲಿ ರೂ.5.00 ಲಕ್ಷದವರೆಗಿನ ಸಾಲಕ್ಕೆ ನಿವ್ವಳ ಶೂನ್ಯ ಬಡ್ಡಿ ದರ ಮತ್ತು ರೂ.5.00 ಲಕ್ಷದಿಂದ ರೂ.10.00 ಲಕ್ಷಗಳವರೆಗಿನ ಸಾಲಕ್ಕೆ ಶೇ.4ರ ಬಡ್ಡಿ ದರ ಅನ್ವಯವಾಗುತ್ತದೆ. ಸಾಲದ ಗರಿಷ್ಟ ಮಿತಿಯನ್ನು ರೂ.10 ಲಕ್ಷಗಳಿಗೆ ನಿಗದಿಪಡಿಸಲಾಗಿದೆ. |
| ಉ) | ಯಾವ ಯಾವ ಉದ್ದೇಶಗಳಿಗೆ ಈ ಯೋಜನೆಯಡಿ ಸಾಲ ನೀಡಲಾಗುವುದು; ಈ ಯೋಜನೆಯ ಉದ್ದೇಶವೇನು? (ವಿವರ ನೀಡುವುದು) | ಕಾಯಕ ಯೋಜನೆಯು ಸ್ವಸಹಾಯ ಗುಂಪುಗಳ ಸದಸ್ಯರ ಕೌಶಲ್ಯಾಭಿವೃದ್ಧಿ ಮತ್ತು ಉದ್ಯಮಶೀಲತೆಯನ್ನು ವೃದ್ಧಿಗೊಳಿಸುವುದರ ಮೂಲಕ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸಿ, ಆದಾಯವನ್ನು ಹೆಚ್ಚಿಸುವ ಉದ್ದೇಶ ಹೊಂದಿರುತ್ತದೆ.<br>ಪ್ರತೀ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಸಮಿತಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ, ಮಾರುಕಟ್ಟೆ ವ್ಯವಸ್ಥೆ ಮತ್ತು ಕೌಶಲ್ಯದ ಆಧಾರವಾಗಿ ನಿರಂತರ ಆದಾಯಗಳಿಸಲು ಗುರುತಿಸುವ ಕನಿಷ್ಟ 5 ಯೋಜನಾ ಚಟುವಟಿಕೆಗಳಲ್ಲಿ ಸ್ವಂತ ಉದ್ಯೋಗವನ್ನು ಕೈಗೊಳ್ಳುವ ಉದ್ದೇಶಗಳಿಗೆ ಸಾಲ ನೀಡಲಾಗುತ್ತದೆ. |

ಸಿಓ 301 ಸಿಎಲ್‌ಎಸ್ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 309 ಸಿಎಲ್‌ಎಸ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

84
CLS
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು–560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಡಾ: ಶಿವರಾಮ್ ಪಾಟೀಲ್ ಎಸ್ (ರಾಯಚೂರು ನಗರ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1615 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಡಾ: ಶಿವರಾಮ್ ಪಾಟೀಲ್ ಎಸ್ (ರಾಯಚೂರು ನಗರ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1615 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

Dhananjaya 18/12

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

**ಕರ್ನಾಟಕ ವಿಧಾನ ಸಭೆ**

**ಮಾನ್ಯ ವಿಧಾನ ಸಭೆ ಸದಸ್ಯರು** : **ಶ್ರೀ ಡಾ ॥ ಶಿವರಾಜ್ ಪಾಟೀಲ್ ಎಸ್**
**ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ** : 1615
**ಉತ್ತರಿಸಬೇಕಾದ ದಿನಾಂಕ** : 19.12.2018

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಯಚೂರು ನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ರಾಂಪೂರ ಗ್ರಾಮದ ಸೊಸೈಟಿಯಲ್ಲಿ ರೈತರಿಗೆ ಸಾಲದ ಮೊತ್ತ ಮತ್ತು ರೈತರ ಕಡ್ಡಾಯ ಬೆಳೆ ಸಾಲದ ಮೊತ್ತವನ್ನು ದುರ್ಬಳಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದಯೇ ? | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ರಾಂಪೂರ, ಈ ಸಂಘದ ವ್ಯಾಪ್ತಿಯ 25 ಜನ ರೈತರು ಇಲಾಖೆಗೆ ದಿನಾಂಕ 21.08.2018ರಂದು ದೂರು ನೀಡಿದ್ದು, ಈ ಬಗ್ಗೆ ಸಹಾಯಕ ನಿಬಂಧಕರು, ರಾಯಚೂರು ಉಪ ವಿಭಾಗ ಇವರು ದಿ:01.09.2018 ರಂದು ಕಲಂ 64ರ ವಿಚಾರಣೆಗೆ ಆದೇಶಿಸಿದ್ದು, ಸದರಿ ವಿಚಾರಣೆಯು ಪ್ರಗತಿಯಲ್ಲಿರುತ್ತದೆ. ದಿನಾಂಕ:20.10.2018 ರಂದು ಸಂಘದ ಮುಖ್ಯ ಕಾರ್ಯನಿರ್ವಾಹಕರನ್ನು ಅಮಾನತ್ತುಗೊಳಿಸಿ ಕಾರ್ಯದರ್ಶಿ ಹುದ್ದೆಯ ಪ್ರಭಾರವನ್ನು ಆರ್.ಡಿ.ಸಿ.ಸಿ ಬ್ಯಾಂಕ್ ನಿ., ರಾಯಚೂರು ಇದರ ವೃತ್ತ ನಿರೀಕ್ಷಕರಿಗೆ ವಹಿಸಲಾಗಿದೆ.<br><br>ದಿನಾಂಕ : 18.11.2018 ರಂದು ಪಶ್ಚಿಮ ಪೋಲಿಸ್ ಠಾಣೆ ರಾಯಚೂರು ಇಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ರಾಂಪೂರ, ಈ ಸಂಘದ ಕಾರ್ಯದರ್ಶಿ ಶ್ರೀ. ಸದ್ದಾಂ ಹುಸೇನ್, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಿ ಬೆಂಗಳೂರು ಶಾಖೆ ರಾಯಚೂರು ಇದರ ಶಾಖಾ ವ್ಯವಸ್ಥಾಪಕ ಶ್ರೀ.ಭಗವಂತ ಹಾಗೂ ಗಣಕಯಂತ್ರ ನಿರ್ವಾಹಕ ಶ್ರೀ.ರವಿ ಇವರ ವಿರುದ್ಧ ಭಾರತ ದಂಡ ಸಂಹಿತೆ 1860 ಕಲಂ 403,409,417,420 ಮತ್ತು 34 ರಡಿಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಾಗಿದೆ. (ಪ್ರಕರಣ ಸಂ.0144//2018) ಹಾಗೂ ಸಂಘದ ಅಧ್ಯಕ್ಷರಿಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 29.ಸಿ ರಡಿಯಲ್ಲಿ ಸಂಘದ ಪದಾಧಿಕಾರಿ ಮತ್ತು ನಿರ್ದೇಶಕ ಸ್ಥಾನದಿಂದ ಅನರ್ಹಗೊಳಿಸುವ ಬಗ್ಗೆ ನೋಟಿಸ್ ನೀಡಲಾಗಿದ್ದು, ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಆರ್.ಡಿ.ಸಿ.ಸಿ ಬ್ಯಾಂಕ್ ನಿ., ರಾಯಚೂರು ರವರಿಗೆ ಸಂಬಂಧಪಟ್ಟ ಬ್ಯಾಂಕ್ ಶಾಖೆಯ ಸಿಬ್ಬಂದಿಯವರ ವಿರುದ್ಧ ಸೂಕ್ತ ಕ್ರಮ ಜರುಗಿಸಲು ಪತ್ರ ಬರೆಯಲಾಗಿದೆ. ಸಂಘದ ಕಾರ್ಯದರ್ಶಿ ಶ್ರೀ.ಸದ್ದಾಂ ಹುಸೇನ್ ಇವರ ಆಸ್ತಿ ವಿವರ ಪಡೆದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ ಕಲಂ 70 ರಡಿ ಅವ್ಯವಹಾರದ ಮೊತ್ತವನ್ನು ವಸೂಲಿ ಮಾಡಲು ದಾವೆ ಹೂಡುವಂತೆ ಸಂಘದ ಪ್ರಭಾರಿ ಕಾರ್ಯದರ್ಶಿ ಹಾಗೂ ಅಧ್ಯಕ್ಷರಿಗೆ ಸೂಚಿಸಲಾಗಿದೆ. |

| | | |
|---|---|---|
| ಇ | ಸಾಲದ ಮೊತ್ತ ಮತ್ತು ಕಡ್ಡಾಯ ಬೆಳೆಗೆ ಸಂಬಂಧಪಟ್ಟಂತೆ ಆರ್.ಡಿ.ಸಿ.ಇ ಬ್ಯಾಂಕ್ ರಾಯಚೂರು ಇಲ್ಲಿನ ಅಧಿಕಾರಿಗಳು ರೈತರ ಎ.ಟಿ.ಎಮ್ ಕಾರ್ಡು ಹಾಗೂ ಪಿನ್‌ಗಳನ್ನು ಪಡೆದು ರೈತರ ದುಡ್ಡುಗಳನ್ನು ಡ್ರಾ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಹೌದು |
| ಈ | ಹಾಗಿದ್ದಲ್ಲಿ ಸಂಬಂಧಿಸಿದ ಬ್ಯಾಂಕ್ ವಿರುದ್ಧ ಮತ್ತು ಅಧಿಕಾರಿಗಳ ವಿರುದ್ದ ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು) | ಸಂಘದ ಕಾರ್ಯದರ್ಶಿಯಾದ ಶ್ರೀ.ಸದ್ದಾಂ ಹುಸೇನ್, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಿ ಬೆಂಗಳೂರು ಶಾಖೆ ರಾಯಚೂರು ಇದರ ಶಾಖಾ ವ್ಯವಸ್ಥಾಪಕ ಶ್ರೀ.ಭಗವಂತ ಹಾಗೂ ಗಣಕಯಂತ್ರ ನಿರ್ವಾಹಕ ಶ್ರೀ.ರವಿ ಇವರ ವಿರುದ್ಧ ಭಾರತ ದಂಡ ಸಂಹಿತೆ 1860 ಕಲಂ 403,409,417,420 ಮತ್ತು 34 ರಡಿಯಲ್ಲಿ ಪ್ರಕರಣ ದಾಖಲಾಗಿದೆ(ಪ್ರಕರಣ ಸಂ.0144//2018). ಹಾಗೂ ಸಂಘದ ಕಾರ್ಯದರ್ಶಿಯವರನ್ನು ಅಮಾನತ್ತುಗೊಳಿಸಿದೆ ಮತ್ತು ಬ್ಯಾಂಕಿನ ಸಿಬ್ಬಂದಿಗಳ ವಿರುದ್ಧ ಸೂಕ್ತ ಶಿಸ್ತು ಕ್ರಮ ಜರುಗಿಸುವಂತೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಆರ್.ಡಿ.ಸಿ.ಸಿ ಬ್ಯಾಂಕ್ ರಾಯಚೂರು ಇವರಿಗೆ ಪತ್ರ ಬರೆಯಲಾಗಿದೆ. ಮುಂದುವರೆದು ಸಂಘದ ಕಾರ್ಯದರ್ಶಿ ಶ್ರೀ.ಸದ್ದಾಂ ಹುಸೇನ್ ಇವರ ಆಸ್ತಿ ವಿವರ ಪಡೆದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ ಕಲಂ 70 ರಡಿ ಅವ್ಯವಹಾರದ ಮೊತ್ತವನ್ನು ವಸೂಲಿ ಮಾಡಲು ದಾವೆ ಹೂಡುವಂತೆ ಸಂಘದ ಪ್ರಭಾರಿ ಕಾರ್ಯದರ್ಶಿ ಹಾಗೂ ಅಧ್ಯಕ್ಷರಿಗೆ ಸೂಚಿಸಲಾಗಿದೆ. |

ಸಿಒ 309 ಸಿಎಲ್‌ಎಸ್ 2018,

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 310 ಸಿಎಲ್‌ಎಸ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

153
415
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು-560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ನಾರಾಯಣಗೌಡ (ಕೆ.ಆರ್.ಪೇಟೆ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1668 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ನಾರಾಯಣಗೌಡ (ಕೆ.ಆರ್.ಪೇಟೆ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1668 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

**ಕರ್ನಾಟಕ ವಿಧಾನ ಸಭೆ**

**ಮಾನ್ಯ ವಿಧಾನ ಸಭೆ ಸದಸ್ಯರು** : ಶ್ರೀ ನಾರಾಯಣ ಗೌಡ (ಕೆ.ಆರ್.ಪೇಟೆ)

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1668

**ಉತ್ತರಿಸಬೇಕಾದ ದಿನಾಂಕ** : 19.12.2018

| | **ಪ್ರಶ್ನೆ** | **ಉತ್ತರ** |
|---|---|---|
| ಅ | ರಾಜ್ಯದಲ್ಲಿ ಸಹಕಾರ ಸಂಘಗಳ ಬಲವರ್ಧನೆಗಾಗಿ ಸರ್ಕಾರ ಯಾವ ಯಾವ ಯೋಜನೆಗಳನ್ನು ರೂಪಿಸಿದೆ (ಯೋಜನೆಯ ಪೂರ್ಣ ವಿವರ ಒದಗಿಸುವುದು) | ಸಹಕಾರ ಸಂಘಗಳ ನಿಬಂಧಕರ ಕಚೇರಿಯಿಂದ 2018-19 ನೇ ಸಾಲಿನಲ್ಲಿ ಸಹಕಾರ ಸಂಘಗಳ ಬಲವರ್ಧನೆಗಾಗಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಅದರ ಸಂಕ್ಷಿಪ್ತ ವಿವರ ಈ ಕೆಳಕಂಡತಿದೆ.<br>1) **ಲ್ಯಾಂಪ್ಸ್ ಮಹಾ ಮಂಡಳಕ್ಕೆ ಮಾರುಕಟ್ಟೆ ಮೂಲ ಸೌಕರ್ಯಗಳ ಸ್ಥಾಪನೆ** : ಲ್ಯಾಂಪ್ಸ್ ಸಹಕಾರ ಮಹಾಮಂಡಳ ಹಾಗೂ ಲ್ಯಾಂಪ್ಸ್ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯಗಳಾದ ಗೋದಾಮು ವ್ಯಾಪಾರ ಮಳಿಗೆ ಹಾಗೂ ಸಂಸ್ಕರಣ ಘಟಕಗಳನ್ನು ಸ್ಥಾಪಿಸಲು ಸರ್ಕಾರದಿಂದ ಅನುದಾನ ನೀಡಲಾಗುತ್ತಿದೆ. ಇದರಿಂದ ಲ್ಯಾಂಪ್ಸ್ ಸಹಕಾರ ಸಂಘಗಳ ಸದಸ್ಯರು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ಸೌಲಭ್ಯ ದೊರಕಿ ಅವರು ಆರ್ಥಿಕವಾಗಿ ಲಾಭ ಪಡೆಯುಲು ಸಹಕಾರಿಯಾಗುತ್ತದೆ.<br>2) **ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಸಹಕಾರ ಸಂಘಗಳಿಗೆ ಹಣಕಾಸು ಸಹಾಯ** : ಈ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಹಿಂದುಳಿದ ವರ್ಗ / ಅಲ್ಪಸಂಖ್ಯಾತರ ಸಹಕಾರಿ ಸಂಘಗಳಿಗೆ ಮೂಲಭೂತ ಸೌಕರ್ಯ ಹೊಂದಲು/ಆಸ್ತಿ ನಿರ್ಮಾಣ ಮಾಡಿಕೊಳ್ಳಲು ಸಹಾಯಧನ ನೀಡಲಾಗುವುದು.ಫಲಾನುಭವಿ ಸಹಕಾರ ಸಂಘಗಳಲ್ಲಿ ಮೂಲಭೂತ ಸೌಕರ್ಯ / ಆಸ್ತಿ ನಿರ್ಮಾಣವಾಗುವುದರಿಂದ ಸಂಘಗಳ ವ್ಯವಹಾರ ಹೆಚ್ಚಿ, ಅವುಗಳ ಉದ್ದೇಶಗಳು ಈಡೇರಲು ಸಾಧ್ಯವಾಗುತ್ತದೆ. |
| ಆ | ಸರ್ಕಾರ ಯಾವ ಯಾವ ಯೋಜನೆಗಾಗಿ ಎಷ್ಟೆಷ್ಟು ಅನುದಾನ ಬಿಡುಗಡೆ ಮಾಡಿದೆ;(ಯೋಜನೆ ಹಾಗೂ ತಾಲ್ಲೂಕುವಾರು ಬಿಡುಗಡೆ ಮಾಡಿರುವ ಅನುದಾನದ ಪೂರ್ಣ ವಿವರ ನೀಡುವುದು); | ಸಹಕಾರ ಸಂಘಗಳ ಬಲವರ್ಧನೆಗೆ ಸಂಬಂಧಿಸಿದಂತೆ 2018-19 ನೇ ಸಾಲಿನಲ್ಲಿ ಒದಗಿಸಿದ ಅನುದಾನದ ಹಾಗೂ ವೆಚ್ಚದ ವಿವರ (see table below) |

| **ಯೋಜನೆಯ ಹೆಸರು** | **ಆಯವ್ಯಯ ೦ ಅವಕಾಶ** | **ಬಿಡುಗಡೆ** | **ಖರ್ಚು (ನವೆಂಬರ್ ಅಂತ್ಯಕ್ಕೆ)** | **ಷರಾ** |
|---|---|---|---|---|
| **ಲ್ಯಾಂಪ್ಸ್ ಮಹಾ ಮಂಡಳಕ್ಕೆ ಮಾರುಕಟ್ಟೆ ಮೂಲ ಸೌಕರ್ಯಗಳ ಸ್ಥಾಪನೆ** | 70.00 | - | - | ಮೊದಲನೇ ಕಂತಿನಲ್ಲಿ ರೂ 50 ಲಕ್ಷಗಳ ಅನುದಾನ ಬಿಡುಗಡೆಗೆ ಪ್ರಸ್ತಾವನೆ ಬಂದಿದ್ದು, ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| **ಪ.ಜಾ/ಪ.ಪಂ/ಹಿಂ.ವ ಮತ್ತುಅಲ್ಪಸಂಖ್ಯಾತರ ಸಹಕಾರ ಸಂಘಗಳಿಗೆ ಹಣಕಾಸು ಸಹಾಯ** | 17.00 | 17.00 | 4.00<br>ಎ) ಹಾಸನ ತಾ. ರೂ.2.00 ಲಕ್ಷ<br>ಬಿ)ಸವಣೂರ ೦ ತಾ. ರೂ 2.00 ಲಕ್ಷ | ಸದರಿ ಯೋಜನೆಯಡಿಯಲ್ಲಿನ ಬಾಕಿ ಇರುವ ಮೊತ್ತ ರೂ.13.00 ಲಕ್ಷಗಳು ಸರ್ಕಾರದಿಂದ ನವೆಂಬರ್ ಮಾಹೆಯಲ್ಲಿ ಬಿಡುಗಡೆಯಾಗಿದ್ದು, ವೆಚ್ಚ ಮಾಡಲು ಕ್ರಮವಿಡಲಾಗುತ್ತಿದೆ. |

**(ರೂ.ಲಕ್ಷಗಳಲ್ಲಿ)**

| | | |
|---|---|---|
| ಇ | ಸರ್ಕಾರ ಬಿಡುಗಡೆ ಮಾಡಿರುವ ಅನುದಾನದಲ್ಲಿ ಕೇಂದ್ರದ ಪಾಲೆಷ್ಟು ಮತ್ತು ರಾಜ್ಯದ ಪಾಲೆಷ್ಟು(ವಿವರ ನೀಡುವುದು)? | ಸಹಕಾರ ಸಂಘಗಳ ಬಲವರ್ಧನೆಗೆ ಸಂಬಂಧಪಟ್ಟ ಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗಿದೆ. |

ಸಿಓ 310 ಸಿಎಲ್ಎಸ್ 2018

**(ಬಂಡೆಪ್ಪ ಖಾಶೆಂಪೂರ)**

ಸಹಕಾರ ಸಚಿವರು.

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 146 ಸಿಸಿಬಿ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

30
415
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು–560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1657 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1657 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

Dhanya 14/12

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

**ಕರ್ನಾಟಕ ವಿಧಾನ ಸಭೆ**

**ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಅರಗ ಜ್ಞಾನೇಂದ್ರ**
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1657**
**ಉತ್ತರಿಸಬೇಕಾದ ದಿನಾಂಕ : 19.12.2018**

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಡಿ.ಸಿ.ಸಿ ಬ್ಯಾಂಕಿನ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ನೀಡಿರುವ ಸಾಲದ ಮೊತ್ತ ಎಷ್ಟು? (ವರ್ಷವಾರು ರೈತರ ಸಂಖ್ಯೆ ಸಹಿತ ವಿವರ ನೀಡುವುದು); | ಕಳೆದ ಮೂರು ವರ್ಷಗಳಿಂದ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಂದ ಸಾಲ ನೀಡಿರುವ ರೈತರ ಸಂಖ್ಯೆ ಮತ್ತು ಮೊತ್ತದ ವಿವರ ಈ ಕೆಳಗಿನಂತಿದೆ. |

| ಸಾಲ ವಿತರಣೆ ಅವಧಿ | ಸಂಖ್ಯೆ | ಮೊಬಲಗು (ರೂ. ಲಕ್ಷಗಳಲ್ಲಿ) |
|---|---|---|
| 2015–16 | 62016 | 28381.01 |
| 2016–17 | 48843 | 23972.12 |
| 2017–18 | 68650 | 32673.76 |
| 2018–19 (ನವೆಂಬರ್–2018 ) ರವರೆಗಿನ | 74460 | 29587.46 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಈ ಸಾಲಗಳಲ್ಲಿ ಹೊಸ ರೈತರಿಗೆ ನೀಡಿದ ಸಾಲ ಮೊತ್ತವೆಷ್ಟು (ವರ್ಷವಾರು ರೈತರ ಸಂಖ್ಯೆಯ ಸಹಿತ ವಿವರ ನೀಡುವುದು)? | ಕಳೆದ ಮೂರು ವರ್ಷಗಳಿಂದ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಂದ ಹೊಸ ರೈತರಿಗೆ ಸಾಲ ನೀಡಿರುವ ಸಂಖ್ಯೆ ಮತ್ತು ಮೊತ್ತದ ವಿವರ ಈ ಕೆಳಗಿನಂತಿದೆ. |

| ಸಾಲ ವಿತರಣೆ ಅವಧಿ | ಸಂಖ್ಯೆ | ಮೊಬಲಗು (ರೂ. ಲಕ್ಷಗಳಲ್ಲಿ) |
|---|---|---|
| 2015–16 | 2480 | 2660.57 |
| 2016–17 | 130 | 90.51 |
| 2017–18 | 6479 | 3808.49 |
| 2018–19 (ನವೆಂಬರ್–2018 ) ರವರೆಗಿನ | 45 | 41.83 |

ಸಿಓ 146 ಸಿಸಿಬಿ 2018

**(ಬಂಡೆಪ್ಪ ಖಾಶೆಂಪೂರ)**
ಸಹಕಾರ ಸಚಿವರು.

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 311 ಸಿಎಲ್‌ಎಸ್ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

122
415
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು-560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಕೆ. ಶಿವನಗೌಡ ನಾಯಕ್ (ದೇವದುರ್ಗ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1588 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಕೆ. ಶಿವನಗೌಡ ನಾಯಕ್ (ದೇವದುರ್ಗ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1588 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು** : **ಶ್ರೀ ಕೆ. ಶಿವನಗೌಡ ನಾಯಕ್ (ದೇವದುರ್ಗ)**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1588

**ಉತ್ತರಿಸಬೇಕಾದ ದಿನಾಂಕ** : 19.12.2018

| ಕ್ರ.ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ದೇವದುರ್ಗ ವಿಧಾನಸಭಾ ಕ್ಷೇತ್ರದಲ್ಲಿ ಸಹಕಾರಿ ಸಂಘಕ್ಕೆ ತೊಗರಿ ಮಾರಲ್ಪಟ್ಟ ರೈತರ ಖಾತೆಗೆ ಬದಲು ಬೇರೊಬ್ಬ ರೈತನ ಖಾತೆಗೆ ಹಣ ಸಂದಾಯ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ, ಕೈಗೊಂಡ ಕ್ರಮಗಳೇನು (ವಿವರ ನೀಡುವುದು). | ದೇವದುರ್ಗ ವಿಧಾನ ಸಭಾ ಕ್ಷೇತ್ರದಲ್ಲಿ 3 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಮಾತ್ರ ತೊಗರಿ ಖರೀದಿ ಕೇಂದ್ರ ತೆಗೆದು ವ್ಯವಹರಿಸಲು ಅನುಮತಿ ನೀಡಲಾಗಿದೆ. ಸಂಬಂಧಿಸಿದ ಮಸರಕಲ್, ಗಬ್ಬೂರು ಹಾಗೂ ಜಾಲಹಳ್ಳಿ 3 ಸಹಕಾರ ಸಂಘಗಳಲ್ಲಿ ತೊಗರಿ ಮಾರಾಟ ಮಾಡಿರುವ ಸಂಬಂಧಪಟ್ಟ ರೈತರ ಉಳಿತಾಯ ಖಾತೆಗೆ ಜಮೆಯಾಗಿರುತ್ತದೆ, ಆದರೆ, ಬೇರೆಯವರ ಖಾತೆಗೆ ಮೊತ್ತ ಜಮೆಯಾಗಿರುವ ಪ್ರಕರಣಗಳು ಕಂಡು ಬಂದಿರುವುದಿಲ್ಲ. |
| ಆ) | ಸಹಕಾರಿ ಸಂಘಗಳ ಕಾರ್ಯದರ್ಶಿಗಳು ಲಂಚ ಪಡೆದು ರೈತರಿಗೆ ಸಾಲ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿರುವುದಿಲ್ಲ. |
| ಇ) | ರೈತರಿಗೆ ಮಾಹಿತಿ ಇಲ್ಲದೆ ರೈತರ ಕೃಷಿ ಜಮೀನನ್ನುಅಡವಿಟ್ಟು ಕಾರ್ಯದರ್ಶಿಗಳು ಕೆಲ ಮಧ್ಯವರ್ತಿಗಳು ಸಾಲ ಪಡೆದಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ? | ಇಲ್ಲ |
| ಈ | ಬಂದಿದ್ದಲ್ಲಿ, ರೈತರಿಗೆ ಮೋಸ ಮಾಡುತ್ತಿರುವ ಇಂತಹ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಳ್ಳುವ ಕ್ರಮಗಳೇನು (ವಿವರ ನೀಡುವುದು) | ಅನ್ವಯವಾಗುವುದಿಲ್ಲ. |

ಸಿಓ 311 ಸಿಎಲ್ಎಸ್ 2018

**(ಬಂಡೆಪ್ಪ ಖಾಶೆಂಪೂರ)**
ಸಹಕಾರ ಸಚಿವರು.

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಸಿಒ 147 ಸಿಸಿಬಿ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.12.2018

220
CIS
19/12/18

**ಇಂದ:**
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು–560 001.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಸುವರ್ಣಸೌಧ
ಬೆಳಗಾವಿ.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೆಂಕಟರೆಡ್ಡಿ ಮದ್ನಾಳ್ (ಯಾದಗಿರಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1708 ಕ್ಕೆ ಉತ್ತರ ನೀಡುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೆಂಕಟರೆಡ್ಡಿ ಮದ್ನಾಳ್ (ಯಾದಗಿರಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1708 ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಡಿ. ಧನಂಜಯ)**
ಶಾಖಾಧಿಕಾರಿ
ಸಹಕಾರ ಇಲಾಖೆ.

ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ವೆಂಕಟರೆಡ್ಡಿ ಮುದ್ನಾಳ್
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1708
ಉತ್ತರಿಸಬೇಕಾದ ದಿನಾಂಕ : 19.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಯಾದಗಿರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪತ್ತಿನ ಸಹಕಾರ ಸಂಘಗಳ/ಬ್ಯಾಂಕುಗಳಲ್ಲಿ ಅವ್ಯವಹಾರ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಯಾದಗಿರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪತ್ತಿನ ಸಹಕಾರ ಸಂಘಗಳ/ಬ್ಯಾಂಕುಗಳಲ್ಲಿ ಯಾವುದೇ ಅವ್ಯವಹಾರ ನಡೆದಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮವೇನು? | ಅನ್ವಯಿಸುವುದಿಲ್ಲ. |

ಸಿಒ 147 ಸಿಸಿಬಿ 2018,

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಒಇ 631 ಎಸ್‌ಎಸ್‌ಟಿ 2018
**ಅಡಕ :** 350 ಪ್ರತಿಗಳು

ಕರ್ನಾಟಕ ಸರ್ಕಾರದ ಸಚಿವಾಲಯ,
ಸುವರ್ಣ ವಿಧಾನಸೌಧ,
ಬೆಂಗಳೂರು, ದಿನಾಂಕ 18.12.2018

95

19/12/18

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ಬೆಳಗಾವಿ

**ಇವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ,
ಬೆಳಗಾವಿ

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ) ಇವರ **ಚುಕ್ಕೆ ಗುರುತಿಲ್ಲದ** ಪ್ರಶ್ನೆ ಸಂಖ್ಯೆ: 1975ಕ್ಕೆ ಉತ್ತರ ಒದಗಿಸುವ ಕುರಿತು.

**ಉಲ್ಲೇಖ:** ತಮ್ಮ ಕಛೇರಿ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/2ಅ/ಪ್ರ.ಸಂ.1975/2018 ದಿನಾಂಕ 05.12.2018

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1975ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

**(ಜಿ.ಶ್ಯಾಮ್ ಹೊಳ್ಳ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಒಳಾಡಳಿತ ಇಲಾಖೆ, (ಬೆಳಗಾವಿ ತಂಡ)

18/12/18

